# ಕೈಲಾಸ-ಮಾನಸಸರೋವರ ಯಾತ್ರೆ



ಸ್ವಾಮಿ ಜ್ಞಾನಘನಾನಂದ

ಪ್ರಕಾಶಕರು

ತಳುಕಿನ ವೆಂಕಣ್ಣಯ್ಯನವರ ಸ್ಮಾರಕ ಗ್ರಂಥಮಾಲೆ

ಮೈಸೂರು

# ವಿಷಯಾನುಕ್ರಮಣಿಕೆ

# ಮುನ್ನುಡಿ



'ನೀಲಗಿರಿಯಿಂದ ಹಿಮಗಿರಿಗೆ' ಯಾತ್ರೆ ಹೋದ ಯಾತ್ರಿಕ ಸನ್ಯಾಸಿ ಒಬ್ಬರ ದಿನಚರಿ ಪುಸ್ತಕ ಇದು. ಇಂತಹ ಗ್ರಂಥಗಳು ಕನ್ನಡ ದಲ್ಲಿ ಅತಿ ವಿರಳ. ಗ್ರಂಥಕ್ಕಾಗಿ ಬರೆಯುವ ಶೈಲಿಯನ್ನು ಅನುಸರಿಸದೆ ಸಹಜವಾಗಿ ಮಾತನಾಡುವ ಶೈಲಿಯಲ್ಲಿ ತಮ್ಮ ಯಾತ್ರಾನುಭವಗಳನ್ನು ವರ್ಣಿಸಿದ್ದಾರೆ. ಇದಲ್ಲದೆ ತಮ್ಮ 'ಮಾನಸಸರೋವರ' ದಲ್ಲಿ ಸ್ಪಂದಿಸಿದ ಆಲೋಚನಾ ತರಂಗಗಳನ್ನೂ ಹೊರಗೆಡವಿರುತ್ತಾರೆ. ಸಂಸಾರದ ಸಂಕೋಲೆ ಗಳಿಂದ ದೂರವಾಗಿ ಬಾನಿನಲ್ಲಿ ಸ್ವತಂತ್ರವಾಗಿ ಹಾರಾಡುವ ಹಕ್ಕಿಯಂತೆ ನೀಲಗಿರಿಯಿಂದ ಹಿಮಗಿರಿಗೆ ಹಾರಿಬಂದ ಈ ಪರಿವ್ರಾಜಕರ ದಿನಚರಿ ಯನ್ನು ಕುಳಿತಲ್ಲೇ ಯಾತ್ರೆ ಮಾಡಿದ ಫಲವನ್ನು ಅನುಭವಿಸಬೇಕೆಂದಿ ರುವ ನಮ್ಮಲ್ಲಿ ಅನೇಕರು ಓದಿ ಆನಂದಪಡುತ್ತಾರೆಂಬುದರಲ್ಲಿ ಸಂಶಯವಿಲ್ಲ. ಹಾಗೆಯೇ ಮುಂದೆ ಆ ಯಾತ್ರೆ ಕೈಗೊಳ್ಳಬೇಕೆಂದಿರುವವರಿಗೆ ಮಾರ್ಗ ದರ್ಶಕವಾದ ಈ ಗ್ರಂಥದ ಪ್ರಯೋಜನ ಅತಿಶಯವಾದದ್ದೆಂದು ಭಾವಿಸುತ್ತೇನೆ.

ಮೈಸೂರು
೧-೭-'೫೫

ಎಂ. ಯಾಮುನಾಚಾರ್ಯ

# ಸಂಪಾದಕನ ಬಿನ್ನಹ

ಶ್ರೀ ಸ್ವಾಮಿ ಜ್ಞಾನಘನಾನಂದರ ಈ 'ಕೈಲಾಸ ಮಾನಸಸರೋವರ ಯಾತ್ರೆ' ಯನ್ನು ಕನ್ನಡಿಗರಿಗೆ ಅರ್ಪಿಸುವ ಸಂಯೋಗ ನನಗೆ ದೊರೆತುದಕ್ಕಾಗಿ ನಾನು ಅತ್ಯಂತ ಸಂತೋಷಿಸುತ್ತೇನೆ. ನಮ್ಮ ಮಾಲೆಯಲ್ಲಿ ಈಗಾಗಲೇ ಪ್ರಕಟವಾಗಿರುವ 'ಅಮರನಾಥಯಾತ್ರೆ,' 'ಹೈಮಾಚಲ ಸಾನ್ನಿಧ್ಯದಲ್ಲಿ' ಪ್ರವಾಸ ಸಾಹಿತ್ಯಗಳಂತೆ 'ಕೈಲಾಸ-ಮಾನಸ ಸರೋವರ ಯಾತ್ರೆ'ಯೂ ನಮ್ಮ ಜನರ ಆದರಕ್ಕೆ ಪಾತ್ರವಾಗಲೆಂದು ಹಾರೈಸುತ್ತೇನೆ.

ಈ ಗ್ರಂಥದ ನಲವತ್ತನೆಯ ಪುಟ, ಇಪ್ಪತ್ತನೆಯ ಸಾಲಿನಲ್ಲಿ ಇರುವ 'ದುಸ್ಥಿತಿ' ಎಂಬುದನ್ನು 'ದುಃಸ್ಥಿತಿ' ಎಂಬುದಾಗಿಯೂ ಎಪ್ಪತ್ತೊಂದನೆಯ ಪುಟ, ಹದಿಮೂರನೆಯ ಸಾಲಿನಲ್ಲಿ ಇರುವ 'ಎದ್ದು ಬೀಳುತ್ತವೆ' ಎಂಬುದನ್ನು 'ಎದ್ದು ಬೀಳುತ್ತಿವೆ' ಎಂಬುದಾಗಿಯೂ ತಿದ್ದಿಕೊಳ್ಳಬೇಕೆಂದು ವಾಚಕರಲ್ಲಿ ವಿನಂತಿ.

ಈ ಗ್ರಂಥವನ್ನು ನಮ್ಮ ಮಾಲೆಯಲ್ಲಿ ಸೇರಿಸಲು ನೆರವಾದ ಶ್ರೀ ಸ್ವಾಮಿ ಜ್ಞಾನಘನಾನಂದರವರನ್ನೂ, ಈ ಪುಸ್ತಕಕ್ಕೆ ಅಮೂಲ್ಯವಾದ ಮುನ್ನುಡಿಯನ್ನು ಬರೆದು ಮಾಲೆಯನ್ನು ಹರಸಿರುವ ಶ್ರೀಮಾನ್ ಯಾಮುನಾಚಾರ್ಯರನ್ನೂ ಕೃತಜ್ಞತೆಯಿಂದ ಸ್ಮರಿಸಿ ವಂದಿಸುತ್ತೇನೆ. ಗ್ರಂಥವನ್ನು ಬಹು ಬೇಗ ಮುದ್ರಿಸಿ ಪ್ರಕಟಿಸಲು ಸಹಾಯಕರಾದ ಹಿಂದೂಸ್ಥಾನ್ ಪ್ರೆಸ್ ಮಾಲೀಕರಾದ ಶ್ರೀಮಾನ್ ಎಂ. ಶಾಮರಾಯರನ್ನು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇನೆ.

ತ. ಸು. ಶಾಮರಾಯ<br>ಸಂಪಾದಕ

# ಯಾತ್ರಿಕನ ಮೊದಲ ಮಾತು

ಬಾಲ್ಯದಿಂದಲೂ ಹಿಮಾಲಯ ಪರ್ವತದ ವರ್ಣನೆ ಕೇಳಿದ್ದೆ, ಓದಿದ್ದೆ, ಸ್ವಪ್ನ ಕಂಡಿದ್ದೆ, ಕನವರಿಸಿದ್ದೆ. ಆಗಾಗ ಭಗವಂತನಲ್ಲಿ ಮೊರೆಯಿಡುತ್ತಿದ್ದೆ: "ಹೇ ಭಗವಂತ, ಜನ ಹೇಳುತ್ತಾರೆ: 'ಹಿಮಾಲಯ ಎಂಬ ಹೆಸರಿಗೆ ತಕ್ಕಂತೆ ಅದು ಹಿಮದ ಆಲಯವೇ ಆಗಿದೆ. ಸುಮಾರು ಎರಡು ಸಾವಿರ ಮೈಲಿ ಉದ್ದವಿರುವ ಆ ಮಹಾ ಪರ್ವತ ಸತತ ಹಿಮದಿಂದ ಕವಿದುಕೊಂಡಿದೆ ಬೆಳ್ಳಿಯ ತಗಡಿನಿಂದ ಹೊದಿಸಿದಂತೆ ಥಳಥಳಿಸುತ್ತಿದೆ. ಅದರ ಸೊಬಗನ್ನು ನೋಡಲು ಈ ಎರಡು ಕಣ್ಣುಗಳು ಸಾಲವೇ ಸಾಲವು. ಅನೇಕ ಋಷಿಗಳು ಅಲ್ಲಿ ತಪಸ್ಸುಮಾಡಿಕೊಂಡಿದ್ದಾರೆ. ಅಲ್ಲಿನ ವಾತಾವರಣ ಪ್ರಶಾಂತವಾಗಿದೆ. ಅಲ್ಲಿಗೆ ಕಾಲು ಹಾಕಿದರೇ ಜೀವನ ಪರಮ ಪಾವನವಾಗಿಬಿಡುತ್ತದೆ. ಅದರ ಮಧ್ಯದಲ್ಲಿ ಇರುವ ಕೈಲಾಸಗಿರಿಯಲ್ಲಿ ತ್ಯಾಗವೇ ಮೂರ್ತಿವೆತ್ತ ಸದಾಶಿವ ಶಂಕರ ದಯಾಮೂರ್ತಿಯಾದ ಪಾರ್ವತೀ ದೇವಿಯೊಡನೆ ವಾಸವಾಗಿದ್ದಾನೆ. ಆ ಕೈಲಾಸಗಿರಿಯ ಹತ್ತಿರವೇ ಸ್ವಯಂ ಚತುರ್ಮುಖ ಬ್ರಹ್ಮನಿಂದ ಸೃಷ್ಟವಾಗಿರುವ ಬಹಳ ವಿಶಾಲವಾದ ಪರಮ ಪವಿತ್ರ ಮಾನಸಸರೋವರವಿದೆ. ಅಲ್ಲಿ ರಾಜಹಂಸಗಳು ಸದಾ ಆನಂದದಿಂದ ಕ್ರೀಡಿಸುತ್ತಿರುತ್ತವೆ. ಆ ಪ್ರದೇಶವನ್ನ ಭೂಸ್ವರ್ಗವೆಂದೇ ಹೇಳಬಹುದು. ಅಲ್ಲಿಂದಲೇ ಗಂಗೆ, ಯಮುನೆ, ಸಿಂಧು, ಬ್ರಹ್ಮಪುತ್ರ ಇವೇ ಮೊದಲಾದ ಪರಮ ಪವಿತ್ರ ಜೀವ ನದಿಗಳು ಹುಟ್ಟಿ ಭಾರತಭೂಮಿಯನ್ನು ಪುನೀತವನ್ನಾಗಿ ಮಾಡಿವೆ. ಅಲ್ಲಿ ಸಕಲ ನೈಸರ್ಗಿಕ ಸೌಂದರ್ಯ ಸುಮ್ಮನೆ ತುಂಬಿ ತುಳುಕಾಡುತ್ತಿದೆ. ಅಲ್ಲಿಗೇನೇ ಧರ್ಮರಾಯ ತನ್ನ ನಾಲ್ಕು ಜನ ಸಹೋದರರೊಡನೆಯೂ, ದ್ರೌಪದೀದೇವಿಯೊಡನೆಯೂ, ನಾಯಿಯ ರೂಪ ಧರಿಸಿದ್ದ ಧರ್ಮನೊಡನೆಯೂ ಹೋಗಿ ಸ್ವರ್ಗಾನುಭವ ಹೊಂದಿದ್ದು. ಶ್ರೀ ಶಂಕರಾಚಾರ್ಯರು ತಮ್ಮ ಪಾದಗಳಿಂದ ಸ್ಪರ್ಶ ಮಾಡಿದ ಕೇದಾರನಾಥ, ಬದರೀನಾಥ ಎಂಬ ಪುಣ್ಯ ಕ್ಷೇತ್ರಗಳಿರುವುದೂ ಅಲ್ಲೇನೇ' ಇತ್ಯಾದಿ, ಅದನ್ನು ನೋಡುವ ಸುಯೋಗ ಎಂದಿಗೆ ದೊರೆಯುವುದು ನನಗೆ? ಹೇ ಕೃಪಾಮಯ, ಆದಷ್ಟು ಬೇಗ ಆ ಸುಯೋಗವನ್ನು ಕರುಣಿಸು. ನಿನ್ನ ಕೃಪೆಯೊಂದಿದ್ದರೆ ಏನು ತಾನೆ ಈ ಜಗತ್ತಿನಲ್ಲಿ ಸಾಧ್ಯವಿಲ್ಲ?"

ಭಗವಂತನ ಕೃಪೆಯಿಂದ ಕೇದಾರ ಬದರೀನಾಥರನ್ನು ನೋಡುವ ಸುಯೋಗ ೧೯೪೩ರಲ್ಲೂ, ಅಮರನಾಥನನ್ನು ನೋಡುವ ಸುಯೋಗ ೧೯೪೫ರಲ್ಲೂ, ಕೈಲಾಸಪತಿಯನ್ನು ನೋಡುವ ಸುಯೋಗ ೧೯೫೧ರಲ್ಲೂ ದೊರೆಯಿತು.

# ಪ್ರಸ್ತಾವನೆ



ಕೈಲಾಸ-ಮಾನಸಸರೋವರ ಯಾತ್ರೆಗೆ ನಡು ಬೇಸಗೆಯಲ್ಲಿ ಹೊರಡಬೇಕು. ಆಗ ಬಿಸಿಲಿನ ತಾಪದಿಂದ ಹಿಮ ಕರಗಿ ದಾರಿಯಾಗುತ್ತದೆ. ಸಾಮಾನ್ಯವಾಗಿ ಜೂನ್ ತಿಂಗಳ ಮೊದಲನೆ ಅಥವಾ ಎರಡನೆ ವಾರದೊಳಗೇ ಆಲ್ಮೋರವನ್ನು ಬಿಡಬೇಕಾಗುತ್ತದೆ. ಆಲ್ಮೋರದಿಂದ ಹೊರಟು ಕೈಲಾಸ-ಮಾನಸಸರೋವರ ದರ್ಶನಮಾಡಿ ಹಿಂದಿರುಗಿ ಆಲ್ಮೋರಕ್ಕೆ ಬರಲು ಸುಮಾರು ಐವತ್ತು ಅರವತ್ತು ದಿನ ಹಿಡಿಯುತ್ತದೆ ಎಂದರೆ ಜೂನ್ ಮೊದಲನೆ ವಾರ ಆಲ್ಮೋರವನ್ನು ಬಿಟ್ಟು ಹೊರಟರೆ ಜುಲೈ ಕೊನೆಯಹೊತ್ತಿಗೆ ಆಲ್ಮೋರಕ್ಕೆ ಹಿಂದಿರುಗಿ ಬರಬಹುದು. ಒಟ್ಟು ೫೮೬೧/೨ ಮೈಲಿ ದೂರ ನಡೆಯಬೇಕಾಗುತ್ತದೆ. ಆದರೆ ಒಂದು ವಿಷಯ. ಉತ್ತರ ಭಾರತದಲ್ಲಿ ಮುಂಗಾರು ಮಳೆ ಜುಲೈ ಮಧ್ಯಭಾಗದಲ್ಲಿ ಕಾಲಿಡುತ್ತದೆ. ಅದು ತನ್ನ ರೋಷಾವೇಶದಿಂದ ಹೊಯ್ಯಲು ಮನಸ್ಸು ಮಾಡುವ ಮುನ್ನವೇ ಆಲ್ಮೋರವನ್ನು ಹಿಂದಿರುಗಿ ಸೇರಲು ಪ್ರಯತ್ನಿಸಬೇಕು. ಇಲ್ಲದಿದ್ದರೆ ದಾರಿಯಲ್ಲಿ ಧಾರಾಕಾರವಾಗಿ ಸುರಿಯುವ ಮಳೆಗೆ ಸಿಕ್ಕಿ ವಿಪರೀತ ಕಷ್ಟಪರಂಪರೆಗಳಿಗೆ ಈಡಾಗಬೇಕಾಗಿ ಬರುತ್ತದೆ. ಅನಿಸಬಹುದು: "ಹಾಗಾದರೆ ಒಂದೆರಡು ವಾರ ಮುಂಚೆಯೇ, ಎಂದರೆ ಮೇ ತಿಂಗಳ ಮೂರನೆ ಅಥವಾ ನಾಲ್ಕನೆ ವಾರದಲ್ಲೇ ಏಕೆ ಆಲ್ಮೋರವನ್ನು ಬಿಟ್ಟು ಹೊರಡಬಾರದು?" ಎಂದು. ಹಾಗೆ ಮಾಡುವುದೂ ನಿಷ್ಪ್ರಯೋಜನ. ಭಾರತಕ್ಕು ಟಿಬೆಟ್ಟಿಗು ಮಧ್ಯೆ ಇರುವ ಲಿಪುಲೇಖ್ ಕಣಿವೆ (೧೬,೭೫೦ ಅಡಿ ಎತ್ತರ) ಪ್ರತಿ ವರ್ಷವೂ ದಟ್ಟವಾದ ಹಿಮದಿಂದ ಕವಿದುಕೊಂಡಿರುತ್ತದೆ. ಅದು ಕರಗಿ ದಾರಿಯಾಗಬೇಕಾದರೆ ಬೇಸಗೆ ಸ್ವಲ್ಪ ಮುಂದುವರಿಯಲೇ ಬೇಕು. ಒಮ್ಮೊಮ್ಮೆ ಅದನ್ನು ದಾಟಲು ಜೂನ್ ಕೊನೆಯವರೆಗೂ ಕಾಯಬೇಕಾಗುತ್ತದೆ. ಆದ್ದರಿಂದ ಆಲ್ಮೋರದಿಂದ ಸ್ವಲ್ಪ ದಿನ ಮುಂಚಿತವಾಗೇ ಹೊರಟರೂ ಭಾರತದ ಕಟ್ಟಕಡೆಯ ಹಳ್ಳಿ ಗರ್ಭಿಯಾಂಗಿನಲ್ಲಿ ಹೆಚ್ಚು ದಿನ ನಿಲ್ಲಬೇಕಾಗುತ್ತದೆ. ರೂಢಿಯಲ್ಲಿರುವಂತೆ ನಾವು ಆಲ್ಮೋರವನ್ನು ಜೂನ್ ತಿಂಗಳ ಮೊದಲನೆ ವಾರ ಬಿಟ್ಟರೂ ಗರ್ಭಿಯಾಂಗಿನಲ್ಲಿ ನಾವೂ ಹತ್ತು ದಿನ ಹೆಚ್ಚಾಗಿ ನಿಲ್ಲಬೇಕಾಯಿತು.

ನಮಗಿಂತ ಮುಂಚೆ ಹೋಗಿದ್ದ ಯಾತ್ರಿಕರು ಒಂದು ತಿಂಗಳಿಗಿಂತ ಹೆಚ್ಚಾಗಿ ಅಲ್ಲಿ ನಿಲ್ಲಬೇಕಾಯಿತು.

ಆಲ್ಮೋರವನ್ನು ಬೇರೆ ಬೇರೆ ಮಾರ್ಗಗಳಿಂದಲೇನೊ ಮುಟ್ಟಬಹುದು. ಆದರೆ ದಕ್ಷಿಣ ಭಾರತದಿಂದ ಅಲ್ಲಿಗೆ ಹೋಗಬೇಕಾದರೆ ಮೊದಲು ಆಗ್ರಾಕ್ಕೆ ಹೋಗಬೇಕು ಅಲ್ಲಿಂದ ಕಾತ್‌ಗೋಡಮ್ ಎಂಬ ಸ್ಥಳಕ್ಕೆ ನೇರವಾಗಿ ಓಡುವ ಮೀಟರ್‌ಗೇಜ್ ಟ್ರೈನಿನಲ್ಲಿ ಪ್ರಯಾಣ ಬೆಳಸಬೇಕು. ಕಾತ್ ಗೋಡಮ್‌ನಿಂದ ಆಲ್ಮೋರಕ್ಕೆ ಎಂಬತ್ತಾರು ಮೈಲಿ ಮಾತ್ರ. ಬಸ್ ಸರ್ವಿಸ್ ಇದೆ. ಆದರೆ ಬಸ್ಸಿನಲ್ಲಿ ಅನುಕೂಲವಾದ ಸ್ಥಳ ಸಿಕ್ಕಬೇಕಾಗಿದ್ದರೆ ಕಾತ್‌ಗೋಡಮ್ಮಿನ ಹಿಂದಿನ ಸ್ಟೇಷನ್ ಹಲ್ದ್ವಾನಿಯಲ್ಲೇ ಇಳಿಯಬೇಕು. ಆಲ್ಮೋರಕ್ಕೆ ಬಸ್ಸುಗಳು ಹೊರಡುವುದು ಅಲ್ಲಿಂದಲೇ ಅವು ಬಳಿಕ ಕಾತ್ ಗೋಡಮ್ ಸ್ಟೇಷನ್ನಿಗೆ ಹೋಗಿ ಸ್ಥಳವಿದ್ದಷ್ಟು ಪ್ರಯಾಣಿಕರನ್ನು ಕೂರಿಸಿ ಕೊಂಡು ಮುಂದಕ್ಕೆ ಪ್ರಯಾಣ ಬೆಳಸುತ್ತವೆ.

ಒಂದುಪಕ್ಷ ಕಾಶಿ ಪ್ರಯಾಗಗಳನ್ನು ನೋಡಿ ಆಲ್ಮೋರಕ್ಕೆ ಹೋಗ ಬೇಕಾಗಿದ್ದರೆ, ಅವನ್ನು ನೋಡಿದನಂತರ ಲಕ್ನೋವಿಗೆ ಬರಬೇಕು. ನೈನಿತಾಲ್ ಎಕ್ಸ್‌ಪ್ರೆಸ್ ಟ್ರೈನು ರಾತ್ರಿ ೯ ಘಂಟೆ ಹೊತ್ತಿಗೆ ಹೊರಟು ಬೆಳಗಿನ ೭-೩೦ ಕ್ಕೆ ಕಾತ್‌ಗೋಡಮ್ಮನ್ನು ಮುಟ್ಟುತ್ತದೆ. ಆ ಟ್ರೈನೂ ಹಲ್ದ್ವಾನಿಯ ಮೂಲಕ ಹಾದುಹೋಗುತ್ತದೆ.

ಹಲ್ದ್ವಾನಿಯನ್ನು ಬಿಟ್ಟ ಬಸ್ಸುಗಳು, ಕಾತ್‌ಗೋಡಮ್ ಸ್ಟೇಷನ್ನಿ ನಲ್ಲಿ ಪ್ರಯಾಣಿಕರನ್ನು ಕೂರಿಸಿಕೊಂಡು ಸುಮಾರು ೧೧-೩೦ ಕ್ಕೆ ಗರಮ್ ಪಾಣಿ ಎಂಬ ಜಾಗಕ್ಕೆ ಬರುತ್ತವೆ. ಅಲ್ಲಿ ಅನೇಕ ಹೋಟೆಲುಗಳಿವೆ. ಪೂರಿ - ಪಲ್ಯ ಮತ್ತು ಇತರ ತಿಂಡಿಗಳು ದೊರೆಯುತ್ತವೆ. ಅಲ್ಲಿ ಊಟ ಮುಗಿಸಿಕೊಳ್ಳಬೇಕು. ಆ ಜಾಗದಲ್ಲಿ ಬಸ್ಸು ಸುಮಾರು ಒಂದು ಘಂಟೆ ಹೊತ್ತು ನಿಲ್ಲುತ್ತದೆ ಮತ್ತೆ ಅದು ಮುಂದುವರಿದು ಸಾಯಂಕಾಲ ನಾಲ್ಕು ಐದರ ಒಳಗೇ ಆಲ್ಮೋರವನ್ನು ತಲುಪುತ್ತದೆ. ಆಲ್ಮೋರದಲ್ಲಿ ಇಳಿದು ಕೊಳ್ಳಲು ಬೇಕಾದಷ್ಟು ಹೋಟೆಲುಗಳಿವೆ.

ನಾವು ನಮ್ಮ ಕೈಲಾಸ-ಮಾನಸಸರೋವರ ಯಾತ್ರೆಯನ್ನು ವಿವಿಧ ಘಟ್ಟಗಳನ್ನಾಗಿ ಮಾಡಿಕೊಳ್ಳಬೇಕಾಗುತ್ತದೆ. ಆಲ್ಮೋರದಿಂದ ಧಾರ್ಚುಲ

ಲದ ವರೆಗೆ ಒಂದು ವಿಧವಾದ ವಾಯುಗುಣ. ಇದೇ ರೀತಿಯಾಗಿ ಧಾರ್ಚುಲದಿಂದ ಗರ್ಭಿಯಾಂಗಿನವರೆಗೆ, ಗರ್ಭಿಯಾಂಗಿನಿಂದ ತಾಕ್ಲ ಕೋಟೆಯವರೆಗೆ, ತಾಕ್ಲಕೋಟೆಯಿಂದ ಕೈಲಾಸಪರ್ವತದವರೆಗೆ ದಾರಿ ಯಲ್ಲಿ ಬೇರೆ ಬೇರೆ ವಾಯುಗುಣಗಳನ್ನು ಅನುಭವಿಸಬೇಕಾಗುತ್ತದೆ ಆದ್ದರಿಂದ ಸವಾರಿಗೇ ಆಗಲಿ ಅಥವಾ ಸಾಮಾನು ಹೊರಲೇ ಆಗಲಿ ಬೇಕಾಗುವ ಕುದುರೆ ಚಮರೀಮೃಗ ಮೊದಲಾದುವು ಆಯಾಯ ಪ್ರದೇಶದವೇ ಆಗಬೇಕು. ಆಲ್ಮೋರದಿಂದ ಧಾರ್ಚುಲಕ್ಕೆ ಹೋಗಿಬರುವ ಕುದುರೆಗಳು ಧಾರ್ಚುಲದಿಂದ ಗರ್ಭಿಯಾಂಗಿಗೆ ಹೋಗಿಬರಲಾರವು. ಅದೇ ರೀತಿಯಾಗಿ ಧಾರ್ಚುಲದಿಂದ ಗರ್ಭಿಯಾಂಗಿಗೆ ಹೋಗಿಬರುವ ಕುದುರೆಗಳು ಗರ್ಭಿಯಾಂಗಿನಿಂದ ತಾಕ್ಲಕೋಟೆಗೆ ಹೋಗಿಬರಲಾರವು. ಅದೇ ರೀತಿಯಾಗಿ ಆಯಾಯ ಪ್ರದೇಶದ ಕೂಲಿಗಳು ಆಯಾಯ ಪ್ರದೇಶ ಬಿಟ್ಟು ಮುಂದಕ್ಕೆ ಹೋಗಲು ಇಚ್ಛಿಸರು. ಚಮರೀಮೃಗಗಳು ಗರ್ಭಿ ಯಾಂಗಿಗಿಂತ ಮೇಲ್ಪಟ್ಟ ಪ್ರದೇಶಗಳಲ್ಲಿ ಮಾತ್ರ ಉಪಯೋಗದಲ್ಲಿ ಇವೆ. ಅವು ಆ ಪ್ರದೇಶ ಬಿಟ್ಟು ಕೆಳಗೆ ಬದುಕಿರಲಾರವು. ಆದ್ದರಿಂದ ನಾವು ಆಲ್ಮೋರ, ಧಾರ್ಚುಲ, ಗರ್ಭಿಯಾಂಗ್, ತಾಕ್ಲಕೋಟೆ ಈ ಸ್ಥಳಗಳಲ್ಲಿ ನಮ್ಮ ನಮ್ಮ ಮುಂದಿನ ಪ್ರಯಾಣಕ್ಕೆ ಬೇಕಾಗುವ ಆಳು-ಕಾಳಿನ ವ್ಯವಸ್ಥೆ ಮಾಡಿಕೊಳ್ಳಬೇಕು.






ಕೈಲಾಸಗಿರಿ ಮಾನಸಸರೋವರಗಳಿಗೆ ಮಾರ್ಗ.

# ೧
# ನೀಲಗಿರಿಯಿಂದ ಹಿಮಗಿರಿಗೆ



ನಾನು ಊಟಿಯನ್ನು (ಉದಕಮಂಡಲವನ್ನು) ಮೇ ೪ನೆ ತಾ|| ಬಿಟ್ಟು ಮದ್ರಾಸು, ಕಲ್ಕತ್ತ, ಶ್ರೀರಾಮಕೃಷ್ಣಪರಮಹಂಸರ ಜನ್ಮಸ್ಥಾನವಾದ ಕಾಮಾರಪುಕುರ, ಶ್ರೀ ಶಾರದಾದೇವಿ ಹುಟ್ಟಿದ ಸ್ಥಳ ಜಯರಾಮವಟಿ, ಕಾಶಿ, ಪ್ರಯಾಗ ಇವುಗಳ ಮೂಲಕ ಹಾದು ಲಕ್ನೋವನ್ನು ತಲುಪಿ ೨೦ ನೆ ತಾ|| ರಾತ್ರಿ ನೈನಿತಾಲ್ ಎಕ್ಸ್‌ಪ್ರೆಸ್ ಟ್ರೈನಿನಲ್ಲಿ ಕುಳಿತು ೨೧ ನೆ ತಾ|| ಪ್ರಾತಃಕಾಲ ಹಲ್ದ್ವಾನಿ ಸ್ಟೇಷನ್ನಿನಲ್ಲಿ ಇಳಿದೆ. ಅಲ್ಲಿಂದ ಬಸ್‌ಸ್ಟ್ಯಾಂಡು ಒಂದು ಫರ್ಲಾಂಗು ದೂರ ಮಾತ್ರ.

ನಾನು ಬಸ್‌ಸ್ಟ್ಯಾಂಡಿಗೆ ಹೋಗಿ ಒಂದು ಬಸ್ಸನ್ನು ಹತ್ತಿದೆ. ಅದು ಎಂಟು ಘಂಟೆಗೆ ಹೊರಟು ಕಾತ್‌ಗೋಡಮ್ ಸ್ಟೇಷನ್ನಿನಲ್ಲಿ ಕೆಲವು ಮಂದಿ ಪ್ರಯಾಣಿಕರನ್ನು ಹತ್ತಿಸಿಕೊಂಡು ಆಲ್ಮೋರದ ಕಡೆ ಮುಂದುವರಿಯಲಾರಂಭಿಸಿತು. ಕಾತ್‌ಗೋಡಮ್‌ನಿಂದಲೇ ಹಿಮಾಲಯದ ತೆರತೆರನಾದ ಬೆಟ್ಟಗಳ ಶ್ರೇಣಿ ಕಣ್ಣಿಗೆ ಬೀಳಲಾರಂಭಿಸಿತು. ರಸ್ತೆ ಬಹಳ ಸೊಗಸಾದ ಟಾರು ರಸ್ತೆ. ಬೇಸಿಗೆಯಾದ್ದರಿಂದ ಮರಗಿಡಗಳು ಅಷ್ಟು ಹಸುರಾಗಿ ಕಾಣಬರಲಿಲ್ಲ. ನೆಲವೆಲ್ಲಾ ಒಣಗಿತ್ತು. ಜನರು ಸಾಮಾನ್ಯವಾಗಿ ಮಳೆಗಾಲದಲ್ಲಿ ಒಳ್ಳೆ ಹುಲ್ಲು ಬರಲಿ ಎಂದು ಬೇಸಿಗೆಯಲ್ಲಿ ಒಣಗಿದ ಹುಲ್ಲುಗಾವಲುಗಳಿಗೆ ಬೆಂಕಿ ಇಡುತ್ತಾರೆ. ನಮ್ಮ ರಸ್ತೆಯ ಬದಿಯಲ್ಲೇ ಇದ್ದ ಒಂದು ಹುಲ್ಲುಗಾವಲು ಆ ರೀತಿಯಾಗಿ ಬೆಂಕಿ ಹಾಕಲ್ಪಟ್ಟು ಬೆಂದು ಸುಡುತ್ತಿತ್ತು. ಗಾಳಿ ಅದರಿಂದ ಕೆಲವು ಕಿಡಿಗಳನ್ನು ಹೊತ್ತು ತಂದು ನಮ್ಮ ಬಸ್ಸಿನ ಮೇಲಿದ್ದ ಒಂದು ಹಾಸಿಗೆಗೆ ತಾಕಿಸಿರಬೇಕು. ಬಟ್ಟೆ ಸೀದು ಹೋಗುತ್ತಿರುವ ವಾಸನೆ ಬರಲಾರಂಭಿಸಿತು. ಬಸ್ಸಿನ ಪ್ರಯಾಣಿಕರೆಲ್ಲಾ ತಮ್ಮ ತಮ್ಮ ಉಡಿಗೆ–ತೊಡಿಗೆಗಳ ಕಡೆ ಕಣ್ಣಿಟ್ಟು ಬೆಂಕಿಗಾಗಿ ಹುಡುಕಲಾರಂಭಿಸಿದರು. ಆದರೆ ಎಲ್ಲಿಯೂ ಏನೂ ಕಾಣಬರಲಿಲ್ಲ. ಅದೃಷ್ಟವಶಾತ್ ಎದುರುಗಡೆಯಿಂದ ಒಂದು ಬಸ್ಸು ಬಂದಿತು. ಅದರ ಡ್ರೈವರು ತಿಳಿಸಿದ: “ಬಸ್ಸಿನ ಮೇಲಿರುವ

ಹಾಸಿಗೆಗಳಿಂದ ಹೊಗೆ ಬರುತ್ತಿದೆ" ಎಂಬುದಾಗಿ. ಒಡನೆಯೆ ನಮ್ಮ ಬಸ್ಸನ್ನು ನಿಲ್ಲಿಸಿ ತರಾತುರಿಯಾಗಿ ಮೇಲಕ್ಕೆ ಹತ್ತಿ ಸೀದುಹೋಗುತ್ತಿದ್ದ ಹಾಸಿಗೆಯನ್ನು ಕೆಳಕ್ಕೆ ಕೆಡವಲಾಯಿತು. ಅದು ಬೇರೆ ಯಾರ ಹಾಸಿಗೆಯೂ ಆಗಿರದೆ ಬಸ್ಸಿನಲ್ಲಿ ಹೆಚ್ಚಾಗಿ ಸ್ಥಳ ಆಕ್ರಮಿಸಿಕೊಂಡು, ಉಳಿದ ಪ್ರಯಾಣಿಕರಿಗೆ ಬಹಳವಾಗಿ ಕಿರುಕುಳ ಕೊಡುತ್ತ ರಾಕ್ಷಸನ ಅವತಾರವೇ ಏನೊ ಎಂಬಂತೆ ವರ್ತಿಸುತ್ತಿದ್ದ ಒಬ್ಬ ಕಲ್ಲು ಹೃದಯದ ಮೂರ್ಖನದಾಗಿತ್ತು. ಅದು ಸ್ವಲ್ಪ ಚೆನ್ನಾಗೇ ಸೀದುಹೋಗಿತ್ತು. ಅದನ್ನು ನೋಡಿ ಜನರೆಂದರು: "ಭಗವಂತ ತಕ್ಕ ಶಾಸ್ತಿ ಮಾಡಿದಾನೆ" ಎಂಬುದಾಗಿ. ಆಗಲಾದರೂ ಆತನಿಗೆ ಬುದ್ಧಿ ಬಂತೆ? ಇಲ್ಲ. ಇನ್ನೂ ಕೆಂಡಗಣ್ಣು ಮಾಡಿಕೊಂಡು ಎಲ್ಲರನ್ನೂ ದುರದುರನೆ ನೋಡಲಾರಂಭಿಸಿದ. ಆತನ ಹಲ್ಲು ಪುಡಿಪುಡಿಯಾಗುವ ಶಬ್ದವೂ ಕೇಳಿಬರಲಾರಂಭಿಸಿತು. "ಹುಮ್!" ಅಂತ ಸುಮ್ಮನೆ ತತ್ತರಿಸಲಾರಂಭಿಸಿದ. ಆಗ ಹತ್ತಿರವೇ ಕುಳಿತಿದ್ದ ಬಲಾಢ್ಯ ಪ್ರಯಾಣಿಕರಿಬ್ಬರ ಸಹನಶಕ್ತಿ ಕೊನೆಗಂಡಿತು. ಅವರು ಎದ್ದು ಹೇಳಿದರು: "ನೋಡು, ಇನ್ನೇನಾದರು ನೀನು 'ಹುಮ್-ಗಿಮ್' ಅಂದೆಯೋ ನಿನ್ನ ಜುಟ್ಟು ಹಿಡಿದು ಓಡುತ್ತಿರುವ ಬಸ್ಸಿನಿಂದಲೇ ಹೊರಕ್ಕೆ ಎತ್ತಿಬಿಸಾಡಿಬಿಡುತ್ತೇವೆ. ಸರಿಯಾಗಿ ಜಾಗ ಬಿಟ್ಟು ಕುಳಿತುಕೊಳ್ಳುತ್ತೀಯೋ ಇಲ್ಲವೊ?" ಆತ ತನ್ನ ಕೋಪವನ್ನು ತಾನೇ ನುಂಗಿಕೊಂಡು, ತಾನು ಹೆಚ್ಚಾಗಿ ಆಕ್ರಮಿಸಿಕೊಂಡಿದ್ದ ಸ್ಥಳವನ್ನು ಸದ್ದಿಲ್ಲದೆ ಬಿಟ್ಟುಕೊಟ್ಟು ಪೆಚ್ಚು ಮೋರೆ ಹಾಕಿಕೊಂಡು ಸುಮ್ಮನೆ ಕುಳಿತುಕೊಂಡ. ಆಗ ನನ್ನ ಮನಸ್ಸು ಹೇಳಿತು: "ನೋಡಿದೆಯಾ! ಆತನ ಸದ್ದು ಅಡಗಿ ಹೋದುದನ್ನ! ದುಷ್ಟರಿಗೆ, ದುಷ್ಪ್ರವೃತ್ತಿಗಳಿಗೆ ಹೆದರಿ ಹೆದರಿ ನಡೆದುಕೊಂಡರೆ ಈ ಜಗತ್ತಿನಲ್ಲಿ ಬಾಳಲಾಗುವುದೆ? ಯಾವ ರೋಗಕ್ಕೆ ಯಾವ ಮದ್ದು ಎಂಬುದನ್ನು ಮೊದಲು ಅರಿತುಕೊಳ್ಳಬೇಕು. ಆಗ ಮಾತ್ರವೇ ಅದು ಬಗ್ಗುತ್ತದೆ. ಆಗ ಮಾತ್ರವೇ ಈ ಜಗತ್ತಿನಲ್ಲಿ ಸುಖವಾಗಿ ಬಾಳಿ ಬದುಕಬಹುದು. ಆಗ ಮಾತ್ರವೇ ನಮ್ಮ ದುಷ್ಪ್ರವೃತ್ತಿಗಳನ್ನು ಗೆದ್ದು ಈ ಜನ್ಮದಲ್ಲೇ ಜೀವನ್ಮುಕ್ತರೂ ಆಗಿಬಿಡಬಹುದು."

ನಮ್ಮ ಬಸ್ಸು ಬೆಟ್ಟಗಳ ವಿವಿಧ ಶ್ರೇಣಿಗಳ ಮೂಲಕ ಹಾದು ನೈನಿತಾಲನ್ನು ಎಡಗಡೆಗೆ ಬಿಟ್ಟು ೧೧-೩೦ ಕ್ಕೆ ಗರಮ್‌ಪಾಣಿಯನ್ನು

ತಲುಪಿತು. ಅಲ್ಲಿನ ಹೋಟೆಲುಗಳಲ್ಲಿ ಪ್ರಯಾಣಿಕರು ತಮ್ಮ ತಮ್ಮ ಊಟೋಪಚಾರಗಳನ್ನು ಮುಗಿಸಿಕೊಂಡನಂತರ ಸುಮಾರು ಒಂದು ಘಂಟೆ ಸಮಯಕ್ಕೆ ಬಸ್ಸು ಮುಂದಕ್ಕೆ ಹೊರಟಿತು. ರಾಣೀಕೇಟನ್ನು ಹಾದು ಸ್ವಲ್ಪ ದೂರ ಮುಂದುವರಿದನಂತರ ಸುಂಕದ ಕಟ್ಟೆ ಸಿಕ್ಕಿತು. ಸುಂಕದವರು ಪ್ರತಿಯೊಬ್ಬ ಪ್ರಯಾಣಿಕನಿಂದಲೂ ಎಂಟೆಂಟಾಣೆ ಸುಂಕ ವಸೂಲುಮಾಡಿಕೊಂಡರು. ಬಸ್ಸು ಅಲ್ಲಿಂದ ಹೊರಟು ಐದು ಘಂಟೆಗೆ ಆಲ್ಮೋರವನ್ನು ತಲುಪಿತು.

ಬಸ್ಸು ಸ್ಟ್ಯಾಂಡನ್ನು ಮುಟ್ಟುವುದಕ್ಕೆ ಮುನ್ನ ಅದು ಒಂದು ಜಾಗದಲ್ಲಿ ನಿಂತು ಒಬ್ಬ ಪ್ರಯಾಣಿಕನನ್ನು ಇಳಿಸಿತು. ನೋಡುತ್ತೇನೆ, ಆತ ನನ್ನ ಹೋಲ್ಡಾಲಿನಂಥ ಒಂದು ಹೋಲ್ಡಾಲನ್ನು ಆಳಿನ ತಲೆ ಮೇಲೆ ಹೊರಸಿಕೊಂಡು ಹೋಗುತ್ತಿದಾನೆ. ನನಗೇಕೊ ಸ್ವಲ್ಪ ಸಂದೇಹ ಬಂತು. ಒಡನೆಯೆ ಇಳಿದುಹೋಗಿ ನೋಡುತ್ತೇನೆ, ಅದು ನನ್ನದೇ! ಅದರ ಮೇಲೆ ನನ್ನ ಹೆಸರು ವಿಳಾಸ ಬರೆದಿರುವ ಪಟ್ಟಿಯನ್ನು ಕಟ್ಟಿದ್ದೆ. ಆಗ ಅದನ್ನು ಆತನಿಗೆ ತೋರಿಸಿದೆ. ಆತ ನನ್ನ ಕ್ಷಮೆಯನ್ನು ಬೇಡಿ, ನನ್ನ ಹಾಸಿಗೆಯನ್ನು ಹಿಂದಿರುಗಿ ಬಸ್ಸಿಗೆ ಹಾಕಿಸಿ, ತನ್ನದನ್ನು ಹೊರಿಸಿಕೊಂಡು ಹೋದ. ಆಗ ಅನಿಸಿತು: "ನೋಡಿದೆಯಾ, ನಮ್ಮ ಗಂಟು ಮೂಟೆಗಳ ಮೇಲೆ ನಮ್ಮ ನಮ್ಮ ಹೆಸರು ವಿಳಾಸ ಪಟ್ಟಿಯನ್ನು ಬರೆದಿರುವುದು ಎಷ್ಟು ಉಪಕಾರಿ!" ಎಂದು.

ನಮ್ಮ ಬಸ್ಸು ಸ್ಟ್ಯಾಂಡನ್ನು ಮುಟ್ಟುವುದೇ ತಡ ಭುಟಿಯಾ (ಭೂತಾನ್) ಕೂಲಿಗಳ ಒಂದು ಹಿಂಡೇ ಅದನ್ನು ಮುತ್ತಿತು. ಕೂಲಿಗಳು ನಾನು ತಾನೆಂದು ಸಾಮಾನು ಹೊರಲು ಮುಂದೆ ಬರಲಾರಂಭಿಸಿದರು. ಒಬ್ಬ ಚಿಕ್ಕ ಹುಡುಗ, ಬಹುಶಃ ಹತ್ತು ವರ್ಷವಿರಬೇಕು, ನನ್ನನ್ನು ಸಮೀಪಿಸಿ ಸುಮಾರು ನಲವತ್ತು ಪೌಂಡು ತೂಕವಿದ್ದ ನನ್ನ ಹಾಸಿಗೆಯನ್ನು ಲೀಲಾಜಾಲವಾಗಿ ತನ್ನ ಬೆನ್ನಿನ ಮೇಲೆ ಹಾಕಿಕೊಂಡು ಹತ್ತಿರ ಹತ್ತಿರ ಒಂದೂವರೆ ಮೈಲಿ ದೂರದಲ್ಲಿದ್ದ ನಮ್ಮ ಆಶ್ರಮಕ್ಕೆ—ರಾಮಕೃಷ್ಣ ಕುಟೀರಕ್ಕೆ—ನನ್ನನ್ನು ಕರೆತಂದು ಬಿಟ್ಟ. ಭಗವಂತ ಅವನಿಗೆ ಕೊಟ್ಟಿರುವ ದೈಹಿಕ ಶಕ್ತಿಯನ್ನು ನೋಡಿ ನಾನು ಸ್ವಲ್ಪ ಆಶ್ಚರ್ಯಪಟ್ಟೆ. ಆಗ ಅನಿಸಿತು: "ನೋಡಿದೆಯಾ ಈ ಹುಡುಗನ್ನ! ಚಿಕ್ಕಂದಿನಿಂದಲೂ ಹೊತ್ತು

ಹೊತ್ತು ಈಗ ಎಷ್ಟೊಂದು ಭಾರವಾದ ವಸ್ತುವನ್ನು ಹೊತ್ತುಕೊಂಡುಬಂದು ಬಿಟ್ಟ! ಅಭ್ಯಾಸದಿಂದ ಏನು ತಾನೆ ಸಾಧ್ಯವಿಲ್ಲ? ಎಲ್ಲವೂ ಸಾಧ್ಯ. ಒಳ್ಳೆಯ ಅಭ್ಯಾಸದಿಂದ ನಮ್ಮ ಸಮಸ್ತ ದುರ್ಗುಣಗಳನ್ನು ನಿರ್ಮೂಲ ಮಾಡಲೂ ಸಾಧ್ಯ, ಸದ್ಗುಣಗಳನ್ನು ಬೆಳಸಿಕೊಳ್ಳಲೂ ಸಾಧ್ಯ. ಅಷ್ಟೇ ಅಲ್ಲ, ಈ ಜನ್ಮದಲ್ಲೇ ಮುಕ್ತರಾಗಲೂ ಸಾಧ್ಯ." ಈ ಭಾವನೆಗಳೆಲ್ಲಾ ನನ್ನ ಮನಸ್ಸಿನಲ್ಲಿ ಮೂಡಲು ನಿಮಿತ್ತಕಾರಣನಾದ ಆ ಹುಡುಗನನ್ನು ಮನಸ್ಸಿನಲ್ಲೇ ವಂದಿಸಿ ಆತನಿಗೆ ಕೊಡಬೇಕಾಗಿದ್ದ ಕೂಲಿ ಕೊಟ್ಟು ಆತನನ್ನು ಕಳುಹಿಸಿಕೊಟ್ಟೆ.

ನಮ್ಮ ಆಶ್ರಮ ಬಹಳ ಸುಂದರವಾದ ಜಾಗದಲ್ಲಿದೆ. ಇದರ ಕೆಳಗೆ ಬಹಳ ಆಳದಲ್ಲಿ ಎಂದರೆ ಸುಮಾರು ೧೦೦೦ ಅಡಿ ಆಳದಲ್ಲಿ ಕೋಶಿ ನದಿ ಹರಿಯುತ್ತಿದೆ. ಮೊದಲು ಇಲ್ಲಿ ಶ್ರೀರಾಮಕೃಷ್ಣಪರಮಹಂಸರ ಪ್ರಪ್ರಥಮ ಶಿಷ್ಯವರ್ಗಕ್ಕೆ ಸೇರಿದ ಸ್ವಾಮಿ ತುರೀಯಾನಂದರು ತಪಸ್ಸು ಮಾಡಿಕೊಂಡಿದ್ದರು. ಈಗ ನಮ್ಮ ಮಿಷನ್ನಿನ ಸನ್ಯಾಸಿಗಳು ಆವಶ್ಯಕ ವೆನಿಸಿದಾಗ ತಪಸ್ಸಿಗಾಗಿ ಈ ಕುಟೀರಕ್ಕೆ ಬಂದು ಕೆಲವು ಕಾಲವನ್ನು ಕಳೆಯುತ್ತಾರೆ.

ಇಂದಿನ ಸಾಯಂಕಾಲ ಪಟ್ಟಣದೊಳಕ್ಕೆ ಹೋಗಿ ಸ್ವಾಮಿ ವಿವೇಕಾ ನಂದರು ಉಪನ್ಯಾಸಕೊಟ್ಟ ಸ್ಥಳವನ್ನು ನೋಡಿಕೊಂಡು ಬಂದೆ.



೨

# ಆಲ್ಮೋರದಿಂದ ಧಾರ್ಚುಲಕ್ಕೆ

**ಪ್ರಯಾಣ ತಾ|| ೧-೬-೧೯೫೧ ರಿಂದ ೮-೬-೧೯೫೧ ರ ವರೆಗೆ.**
**ದೂರ ೯೨ ೧|೪ ಮೈಲಿ.**



ಕೈಲಾಸ-ಮಾನಸಸರೋವರಕ್ಕೆ ಒಂಟಿಯಾಗಿ ಹೋಗಿಬರಲು ಸಾಧ್ಯವಿಲ್ಲ. ಕಳ್ಳಕಾಕರ ಭಯ—ವಿಶೇಷತಃ ಟಿಬೆಟ್ಟಿನಲ್ಲಿ. ಗುಂಪು ಗುಂಪಾಗೇ ಹೋಗಬೇಕು. ಜೊತೆಯಲ್ಲಿ ಬಂದೂಕವನ್ನೂ ಇಟ್ಟುಕೊಂಡಿರ ಬೇಕಾಗುತ್ತೆ. ಗುಜರಾತು ಕಾಥೇವಾಡ ಇವುಗಳ ಕಡೆಯಿಂದ ಕೆಲವರು ಕೈಲಾಸ-ಮಾನಸಸರೋವರ ಯಾತ್ರೆಗಾಗಿ ಬರುವರೆಂಬ ವದಂತಿ ಇತ್ತು. ಆದರೆ ಆ ಕಡೆಯಿಂದ ಯಾರೂ ಬರಲಿಲ್ಲ. ಕಾರಣ, ಏನೊ ತಾಪತ್ರಯ. ಸಂಸಾರ ಅಂದರೆ ಇದ್ದೇ ಇದೆಯಲ್ಲ ಏನಾದರೂ ಒಂದು !

ನಾನು ಆಲ್ಮೋರವನ್ನು ತಲುಪುವ ಮುನ್ನವೇ ಆಂಧ್ರರ ಒಂದು ಗುಂಪು—ಒಬ್ಬ ಗಂಡಸು, ಐದು ಜನ ವಿಧವೆಯರು—ಕೈಲಾಸಗಿರಿಯ ಕಡೆ ಪ್ರಯಾಣ ಬೆಳಸಿತ್ತು. ನಾನು ಆಲ್ಮೋರವನ್ನು ತಲುಪಿದ ಒಂದೆರಡು ದಿನಗಳಲ್ಲೇ ಇಬ್ಬರು ಬಂಗಾಳಿ ಯುವಕರು ಯಾತ್ರಿಕರಾಗಿ ಬಂದರು. ಆದರೆ ಅವರಿಬ್ಬರೇ ಒಂದು ಗುಂಪಾಗಿ ಹೋಗಲು ಇಚ್ಛೆಪಟ್ಟು ಕೈಲಾಸ ಗಿರಿಯ ಕಡೆ ಮುಂದುವರಿದರು. ಬಳಿಕ ಮೇ ೨೯ ನೆ ತಾರೀಖು ಕಲ್ಕತ್ತದ ಧನಿಕರೊಬ್ಬರು ತಮ್ಮ ಮಗನೊಡನೆಯೂ, ಇಬ್ಬರು ಮಿತ್ರರೊಡನೆಯೂ, ಮೂರು ಜನ ಸ್ವಂತ ಸೇವಕರೊಡನೆಯೂ, ಹನ್ನೊಂದು ಜನ ಡಾರ್ಜಲಿಂಗ್ ಕೂಲಿಗಳೊಡನೆಯೂ ಆಲ್ಮೋರವನ್ನು ತಲುಪಿದರು. ಆ ಗುಂಪಿನವರು ನನ್ನನ್ನು ತಮ್ಮ ಜೊತೆಯಲ್ಲಿ ಕರೆದುಕೊಂಡು ಹೋಗಲು ಒಪ್ಪಿದರು.

**ಪ್ರಯಾಣಕ್ಕೆ ಸಿದ್ಧತೆ**

ಕೇಳಿದ್ದೆವು, ಭಾರತದ ಗಡಿಯನ್ನು ಮುಟ್ಟುವವರೆಗೆ ದಾರಿಯಲ್ಲಿ ಉದ್ದಕ್ಕೂ ಗೋಧಿಹಿಟ್ಟು, ಈರುಳ್ಳಿ, ಆಲೂಗಡ್ಡೆ, ಅಕ್ಕಿ, ಬೇಳೆ ಇವೇ ಮೊದಲಾದುವು ಅಂಗಡಿಗಳಲ್ಲಿ ಸಿಕ್ಕುವುವು ಎಂದು. ಆದರೂ ಅನಿರೀಕ್ಷಿತ

ಸಮಯಗಳಿಗೆ ಒದಗಲೆಂದು ಸ್ವಲ್ಪ ಬೇಳೆ, ಗೋಧಿಹಿಟ್ಟು, ಅಕ್ಕಿ, ಆಲೂಗಡ್ಡೆ, ಈರುಳ್ಳಿ, ಸಕ್ಕರೆ, ಉಪ್ಪು ಮೊದಲಾದುವುಗಳನ್ನು ಕೊಂಡು ಕೊಂಡೆವು. ನಮ್ಮ ಗುಂಪು ಬಹಳ ದೊಡ್ಡದಾದುದರಿಂದ ಅದಕ್ಕೆ ಬೇಕಾಗುವ ಆಳು ಕಾಳು ಇವೇ ಮೊದಲಾದ ಸಲಕರಣೆಗಳನ್ನು ಒದಗಿಸಿಕೊಳ್ಳಲು ಮೂರು ದಿನ ಹಿಡಿಯಿತು.

ನಮ್ಮ ಗುಂಪಿನವರು ಕಲ್ಕತ್ತದಿಂದಲೇ ಊಟೋಪಚಾರಗಳಿಗಾಗಿ ಹಾರ್ಲಿಕ್ಸ್ ಸೀಸೆಗಳು, ಮಿಲ್ಕ್ ಪೌಡರ್, ಡಾರ್ಜಲಿಂಗ್ ಟೀ, ಒಣಗಿಸಿದ ಕಾಯಿಪಲ್ಯಗಳು, ಮಸಾಲೆ ಪುಡಿ, ನಿಂಬೆ ಮತ್ತು ಮಾವಿನ ಕಾಯಿಯ ಉಪ್ಪಿನ ಕಾಯಿಗಳು, ಬಗೆ ಬಗೆಯ ಬಿಸ್ಕತ್ತುಗಳು, ಒಣದ್ರಾಕ್ಷಿ, ಬಿಡಿಸಿದ ಬಾದಾಮಿ ಬೀಜ, ಗೇರುಬೀಜ, ಬೆಣ್ಣೆ ಟಿನ್ನುಗಳು ಇವೇ ಮೊದಲಾದು ವನ್ನೂ ದೇಹಾರೋಗ್ಯಕ್ಕಾಗಿ ಹಲವಾರು ವಿಧದ ಅಲೋಪತಿ ಔಷಧ ಗಳನ್ನೂ ಹತ್ತಿ ಬ್ಯಾಂಡೇಜು ಇವನ್ನೂ ಅಡಿಗೆಗಾಗಿ ಆರು ಜನಕ್ಕೆ ಆಗುವಂಥ ಒಂದು ಇಕ್‌ಮಿಕ್ ಕುಕ್ಕರ್, ಒಂದು ಪ್ರೈಮಸ್ ಸ್ಟೌವ್, ಒಂದು ಬಕೆಟ್ಟು, ತಟ್ಟೆ ಬಟ್ಟಲು ಇವೇ ಮೊದಲಾದ ಪಾತ್ರೆ ಪದಾರ್ಥ ಗಳನ್ನೂ ಸೌದೆಗಾಗಿ ಅಮೆರಿಕನ್ ಫ್ಯೂಯಲ್ ಟ್ಯಾಬ್ಲೆಟ್ಟುಗಳನ್ನೂ[1] ಬೆಳಕಿಗಾಗಿ ಎಪ್ಪತ್ತೆರಡು ಎಪ್ಪತ್ತೆರಡು ಘಂಟೆಗಳ ಕಾಲ ಉರಿಯುವ ದೊಡ್ಡ ದೊಡ್ಡ ಮೂರು ಟಾರ್ಚು, ಒಂದು ಲಾಟೀನು, ಸಾಕಾದಷ್ಟು ಮೊಂಬತ್ತಿ ಇವನ್ನೂ ನೀರಡಿಕೆಗಾಗಿ ಅನೇಕ ಬಗೆಯ ಪೆಪ್ಪರಮಿಂಟು ಗಳನ್ನೂ ಉಡಿಗೆ-ತೊಡಿಗೆಗಾಗಿ ಸಾಕಾದಷ್ಟು ಹತ್ತಿಯ ಮತ್ತು ಉಣ್ಣೆಯ ಬಟ್ಟೆಗಳನ್ನೂ ಹಾಸಿಗೆಗಾಗಿ ಒಳ್ಳೆ ಕಂಬಳಿ ಮತ್ತು ಸ್ಲೀಪಿಂಗ್ ಬ್ಯಾಗ್[2] ಅನ್ನೂ; ಟಿಬೆಟ್ಟಿನಲ್ಲಿ ಉಪಯೋಗಿಸಲು ಮೂರು ಒಳ್ಳೆ

---

[1] ಇದು ಒಂದು ಇಂಚು ಚಚ್ಚೌಕದ ಗಾತ್ರ ಇತ್ತು. ಇದಕ್ಕೆ ಬೆಂಕಿ ಕಡ್ಡಿ ಗೀಚಿ ಹಚ್ಚಿದರೆ ಹೊತ್ತಿಕೊಂಡುಬಿಡುತ್ತಿತ್ತು. ಇದು ಸುಮಾರು ಇಪ್ಪತ್ತು ನಿಮಿಷಗಳ ಕಾಲ ಉರಿಯುತ್ತಿತ್ತು. ಇಂಥ ಎರಡು ಟ್ಯಾಬ್ಲೆಟ್ಟುಗಳೇ ಯಥೇಷ್ಟ ವಾಗುತ್ತಿತ್ತು ಒಂದು ಇಕ್‌ಮಿಕ್ ಕುಕ್ಕರ್ ಅಡಿಗೆಗೆ.

[2] ಇದು ಅಮೆರಿಕದಲ್ಲಿ ತಯಾರಾದ ಒಂದು ವಿಧವಾದ ಚೀಲ. ಇದನ್ನು ಹಕ್ಕಿಗಳ ಗರಿಗಳಿಂದ ನಿರ್ಮಿಸಿದ್ದರು. ಇದರಲ್ಲಿ ಆ ವ್ಯವಸ್ಥೆ ಇದೆ, ಮನುಷ್ಯ ಅದರೊಳಕ್ಕೆ ಸೇರಿ ಮಲಗಿಕೊಂಡು ಮೂಗು ಕಣ್ಣುಗಳನ್ನು ಬಿಟ್ಟು ಉಳಿದ ಎಲ್ಲಾ ಭಾಗಗಳನ್ನೂ ಮುಚ್ಚಿಕೊಂಡುಬಿಡಬಹುದು. ಇದರ ತೂಕ ಏಳೆಂಟು ಪೌಂಡು ಮಾತ್ರ. ಇದರೊಳಗೆ ಮಲಗಿದ್ದೇ ಆದರೆ, ಚಳಿಯು ಅಷ್ಟನೂ ಹತ್ತಿರ ಸುಳಿಯುವ ಹಾಗಿಲ್ಲ.

ಟಿಂಟುಗಳನ್ನೂ ಮಳೆಯಿಂದ ಹಾಸಿಗೆ ಬಟ್ಟೆ ಬರೆಗಳನ್ನು ರಕ್ಷಿಸಿಕೊಳ್ಳಲು ಸಾಕಾದಷ್ಟು ವಾಟರ್ ಪ್ರೂಫ್ ಬಟ್ಟೆಗಳನ್ನೂ ತಮ್ಮನ್ನು ರಕ್ಷಿಸಿಕೊಳ್ಳಲು ಮಳೆ-ಕೋಟು, ಛತ್ರಿ, ಇವೇ ಮೊದಲಾದುವನ್ನೂ ತಂದಿದ್ದರು.

ನನ್ನ ಹತ್ತಿರ ಮೂರು ಕಂಬಳಿ ಒಂದು ಸ್ವೆಟರ್, ಒಂದು ಮಂಕೀ ಕ್ಯಾಪ್, ಒಂದು ಮಫ್ಲರ್, ಒಂದು ಉಣ್ಣೆ ಅರ್ಧ - ಕೋಟು, ಒಂದು ಉಣ್ಣೆ ಓವರ್‌ಕೋಟು, ಒಂಸು ಶಾಲು, ಒಂದು ಮಳೆ - ಕೋಟು, ಒಂದು ಛತ್ರಿ, ಒಂದು ಬಲವಾದ ವಾಕಿಂಗ್ ಸ್ಟಿಕ್ಕು, ಒಂದು ಜೊತೆ ಉಣ್ಣೆ ಕೈಚೀಲ, ಒಂದು ಜೊತೆ ಉಣ್ಣೆ ಪೂರ್ಣ-ಕಾಲುಚೀಲ, ಎರಡು ಜೊತೆ ಉಣ್ಣೆ ಅರ್ಧ-ಕಾಲುಚೀಲ, ಆರು ಜೊತೆ ಹತ್ತಿಯ ಅರ್ಧ - ಕಾಲುಚೀಲ, ಒಂದು ಜಂಖಾನ, ಒಂದು ಹೋಲ್ಡಾಲು, ಹಾಸಿಗೆ ಕಟ್ಟಲು ಒಂದು ರಬ್ಬರ್ ಷೀಟು, ಸಾಕಾದಷ್ಟು ಪಂಚೆ ಉತ್ತರೀಯ ಷರಟು ಇದ್ದುವು.

## ಆಲ್ಮೋರದಿಂದ ಧೌಲಚಿನಕ್ಕೆ

೫,೨೦೦ ಅಡಿ ಎತ್ತರದಿಂದ ೬೦೦೦ ಅಡಿ ಎತ್ತರಕ್ಕೆ, ದೂರ ೧೩ ಮೈಲಿ.

ಪ್ರಯಾಣ ಬೆಳಗಿನ ೬-೩೦ ರಿಂದ ಅಪರಾಹ್ಣ ೨-೩೦ ರ ವರೆಗೆ.

ತಾ|| ೧-೬-'೫೧, ಶುಕ್ರವಾರ.

ನಮ್ಮ ಗುಂಪಿನ ಯಾತ್ರಿಕರು ನನ್ನನ್ನೂ ಸೇರಿಸಿ ಒಟ್ಟು ಎಂಟು. ನಾವು ಯಾತ್ರಿಕರು ಎಂಟು ಜನ, ಹನ್ನೊಂದು ಮಂದಿ ಡಾರ್ಜಲಿಂಗ್ ಕೂಲಿಗಳು, ಐದು ಸವಾರಿ ಕುದುರೆಗಳು, ನಾಲ್ಕು ಸಾಮಾನು ಹೊರುವ ಕುದುರೆಗಳು ಒಂದೊಂದು ಕುದುರೆಗೂ ಒಬ್ಬೊಬ್ಬ ಆಳು-ಒಟ್ಟು ಇಪ್ಪತ್ತೆಂಟು ಜನ ಜೂನ್ ಮೊದಲನೆ ತಾರೀಖು ಪ್ರಾತಃಕಾಲ ೬–೩೦ ಕ್ಕೆ ಸರಿಯಾಗಿ ಆಲ್ಮೋರ ಬಿಟ್ಟೆವು. ಜನರ ಕಣ್ಣಿಗೆ ಇದು ಒಂದು ದೊಡ್ಡ ಮೆರವಣಿಗೆ ಯಾಗೇ ಕಂಡುಬಂತು. ಪ್ರವಾಸಿ ಮಂದಿರ (ಟಿ. ಬಿ.) ಬಿಟ್ಟು ಸ್ವಲ್ಪ ದೂರ ಮುಂದುವರಿಯುವುದರಲ್ಲೇ ತುಂತುರು ಹನಿ ಬೀಳಲಾರಂಭಿಸಿತು. ಇದನ್ನು ನೋಡಿ ಜನ ಹೇಳಿಕೊಳ್ಳಲಾರಂಭಿಸಿದರು : "ಇದು ನಿಜವಾ ಗಿಯೂ ಪುಷ್ಪ ವೃಷ್ಟಿಯೇ. ಇವರ ಯಾತ್ರೆಗೆ ಇದು ಬಹಳ ಒಳ್ಳೆಯ ಶಕುನ." ಬೀದಿಯ ಇಕ್ಕೆಲಗಳ ಮನೆಗಳಿಂದಲೂ ಚಿಕ್ಕ ಪುಟ್ಟ ಮಕ್ಕಳಾದಿ ಯಾಗಿ ವೃದ್ಧರವರೆಗೆ ಎಲ್ಲರೂ ಹೊರಕ್ಕೆ ಬಂದು ನಮ್ಮ ಯಾತ್ರೆ ಯಶಸ್ವಿ ಯಾಗಿ ಆಗಲಿ ಎಂದು ಜಯ ಘೋಷವಿತ್ತರು. ಅವರೆಲ್ಲರ ಮುಖದಲ್ಲೂ

ಆನಂದ ಎಷ್ಟರ ಮಟ್ಟಿಗೆ ನಲಿದಾಡುತ್ತಿತ್ತು ಎಂಬುದನ್ನು ಹೃದಯದ ಭಾಷೆಯಲ್ಲಿ ವ್ಯಕ್ತಪಡಿಸಲು ಸಾಧ್ಯವೇ ವಿನಾ ಲೇಖನಿಯ ಮೂಲಕ ಎಂದಿಗೂ ಇಲ್ಲ. ನಮ್ಮ ನಮ್ಮ ಹೃದಯವೂ ಭಗವಂತನ ಕೃಪೆಯನ್ನು ಸ್ಮರಿಸಿಕೊಂಡು ಆತನಿಗೆ ಹೃತ್ಪೂರ್ವಕ ವಂದನೆಯನ್ನು ಸಲ್ಲಿಸಲಾರಂಭಿಸಿದುವು.

ನಾವು ಹಾಗೇ ಮುಂದುವರಿದು ೧೧ ಘಂಟೆಗೆ 'ಬಾರಚಿನ' ಎಂಬ ಗ್ರಾಮಕ್ಕೆ ಬಂದೆವು ಅಲ್ಲಿದ್ದ ಒಂದು ಹೋಟೆಲಿಗೆ ಹೋಗಿ ನಾವು ತಂದಿದ್ದ ಟಿಫಿನ್ನನ್ನು ತಿಂದು ಮತ್ತೆ ಹನ್ನೆರಡು ಘಂಟೆ ಸಮಯಕ್ಕೆ ನಮ್ಮ ಪ್ರಯಾಣವನ್ನು ಮುಂದುವರಿಸಿದೆವು. ಆ ಹೋಟಲಿನ ಮಾಲೀಕನ ಹೆಸರು 'ಠಾಕೂರ್ ಸೇಟ್' ಎಂಬುದಾಗಿ. ಆತ ಬಹಳ ಒಳ್ಳೆಯವ. ತನ್ನ ಕೈಲಾದ ಸಹಾಯವನ್ನೆಲ್ಲಾ ನಮಗೆ ನೀಡಿದ. ಆತನ ನಯ, ವಿನಯ, ನಡೆ, ನುಡಿ ಇವನ್ನೆಲ್ಲಾ ನೋಡಿ ನನಗೆ ಬಹಳ ಆನಂದವಾಯಿತು. ಒಂದು ಕಡೆ ಸ್ವಾಮಿ ವಿವೇಕಾನಂದರು ತಮ್ಮ ಭಾಷಣದಲ್ಲಿ ಹೇಳಿದಾರೆ: "ನೀವು ನಿಜವಾದ ಭಾರತವನ್ನು ನೋಡಬೇಕಾದರೆ ಅದನ್ನು ಹಳ್ಳಿಗಳಿಗೆ ಹೋಗಿ ನೋಡಬೇಕು" ಎಂಬುದಾಗಿ. ನಿಜವಾಗಿಯೂ ಭಾರತದ ಗ್ರಾಮವಾಸಿಗಳಲ್ಲಿ ನಮ್ಮ ಸಂಸ್ಕೃತಿ ಎಷ್ಟು ಬಲವಾಗಿ ಬೇರೂರಿದೆ, ಏನುಕತೆ! ಆತನ ಮಾತುಕತೆಗಳಲ್ಲಿ ರಾಮಾಯಣ, ಮಹಾಭಾರತ ಇವೆಲ್ಲಾ ಹೊರಹೊಮ್ಮಿ ಬರಲಾರಂಭಿಸಿದುವು.

ಇಲ್ಲಿಂದಾಚೆಗೆ ನಮ್ಮ ದಾರಿ ದೇವದಾರು (ಶಂಕು ವೃಕ್ಷ) ಮರಗಳ ಅರಣ್ಯದ ಮೂಲಕ ಹಾದು ಹೋಗುತ್ತದೆ. ಆ ಮರಗಳಿಂದ ಬರುತ್ತಿದ್ದ ಸುವಾಸನೆ ಬಹಳ ಮನೋಹರವಾಗಿತ್ತು. ಅಲ್ಲಲ್ಲಿ ಹಕ್ಕಿಗಳು ಕುಳಿತು ಒಂದು ವಿಧವಾಗಿ ಕೂಗುತ್ತಿದ್ದವು. ಅವುಗಳ ಕೂಗು 'ಮುಂದುವರಿಯಿರಿ, ಮುಂದುವರಿಯಿರಿ' ಎಂಬುದಾಗಿ ಹೇಳುತ್ತಿರುವುದೊ ಏನೊ ಎಂಬಂತೆ ತೋರಿಬರುತ್ತಿತ್ತು. ಮುಂದುವರಿಯುತ್ತ ಮುಂದುವರಿಯುತ್ತ ಪ್ರಕೃತಿ ಸೌಂದರ್ಯ ಆ ರೀತಿಯಾಗಿ ತೋರಿಬರಲಾರಂಭಿಸಿತು—ನಾನು ಊಟಿಯ ರಸ್ತೆಗಳಲ್ಲಿ ಹೋಗುತ್ತಿರಬಹುದೇ ಎಂಬ ಭ್ರಮೆ ಆಗಲಾರಂಭಿಸಿತು. ಈ ದಿನ ಒಂದು ಮೈಲಿಯುದ್ದದ ಒಂದು ತಿಟ್ಟನ್ನು, ಒಂದೂವರೆ ಮೈಲಿಯುದ್ದದ ಇನ್ನೊಂದು ತಿಟ್ಟನ್ನು ಹತ್ತಬೇಕಾಯಿತು. ಬೆಟ್ಟಗಳಾದ ಮೇಲೆ

ಬೆಟ್ಟಗಳನ್ನು ಹತ್ತಿ, ಕಣಿವೆಗಳಾದ ಮೇಲೆ ಕಣಿವೆಗಳನ್ನು ದಾಟಿ ಅಪರಾಹ್ಣ ೨-೩೦ಕ್ಕೆ ಧೌಲೆಛಿನದ ಪ್ರವಾಸಿ ಮಂದಿರವನ್ನು ತಲುಪಿದೆವು. ಕೂಲಿಗಳು ಒಬ್ಬರಾದ ಮೇಲೆ ಒಬ್ಬರು ಬರಲಾರಂಭಿಸಿದರು. ಕಟ್ಟಕಡೆಗೆ ಸಾಮಾನಿನ ಕುದುರೆಗಳೂ ಬಂದು ಸೇರಿದುವು.

ನಾವು ಪ್ರವಾಸಿ ಮಂದಿರವನ್ನು ತಲುಪುವುದರಲ್ಲಿ ನಮ್ಮ ಬಟ್ಟೆಬರೆ ಬೆವರಿನಿಂದ ಸುಮ್ಮನೆ ನೆನೆದು ಒದ್ದೆಮುದ್ದೆಯಾಗಿಬಿಟ್ಟಿತ್ತು. ಮಂದಿರ ದಲ್ಲಿ ಸ್ವಲ್ಪ ಹೊತ್ತು ವಿಶ್ರಮಿಸಿಕೊಂಡು ಹತ್ತಿರವೇ ಇದ್ದ ಒಂದು ಝರಿಯಲ್ಲಿ ಸ್ನಾನಮಾಡಿ ಬಂದೆ.

ನಾವು ನಮ್ಮ ಇಡೀ ಪ್ರಯಾಣದಲ್ಲೆಲ್ಲಾ ಎಲ್ಲೆಲ್ಲಿ ಪ್ರವಾಸಿ ಮಂದಿರ, ಎಲ್ಲೆಲ್ಲಿ ಅರಣ್ಯ ಶಾಖೆಯ ವಿಶ್ರಾಂತಿ ಗೃಹ ಇದ್ದುವೊ ಅಂಥ ಸ್ಥಳಗಳನ್ನೇ ಆರಿಸಿಕೊಂಡು ಅಲ್ಲಿ ತಂಗಲು ಪ್ರಯತ್ನಮಾಡುತ್ತಿದ್ದೆವು. ಅವಕ್ಕೆ ಒಂದು ದಿನಕ್ಕೆ ನಾಲ್ಕು ರೂಪಾಯಿ ಬಾಡಿಗೆ. ಬಂಗಲೆಯ ಮುಖ್ಯ ಕಟ್ಟಡದಲ್ಲಿ ಎರಡು ವಾಸದ ಕೊಠಡಿಗಳೂ, ಅವಕ್ಕೆ ಸೇರಿದ ಹಾಗೆ ಎರಡು ಬಚ್ಚಲ ಮನೆಗಳೂ ಇರುತ್ತಿದ್ದುವು. ಧಾರ್ಚುಲದ ಪ್ರವಾಸಿ ಮಂದಿರದಲ್ಲಿ ಒಂದೇ ಒಂದು ವಾಸದ ಕೊಠಡಿ, ಅದಕ್ಕೆ ಸೇರಿದ ಹಾಗೆ ಒಂದು ಬಚ್ಚಲಮನೆ ಮಾತ್ರ ಇದೆ. ಗರ್ಭಿಯಾಂಗಿನ ಪ್ರವಾಸಿ ಮಂದಿರದಲ್ಲಿ ಎರಡು ವಾಸದ ಕೊಠಡಿಗಳೇನೊ ಇವೆ, ಆದರೆ ಒಂದಕ್ಕೆಮಾತ್ರ ಬಚ್ಚಲು ಮನೆ ಇದೆ. ಪ್ರತಿಯೊಂದು ಪ್ರವಾಸಿಮಂದಿರದಲ್ಲೂ ಒಂದೊಂದು ಮುಖ್ಯ ಕಟ್ಟಡ ವಲ್ಲದೆ, ಸೇವಕರು ಇಳಿದುಕೊಳ್ಳಲು ಬೇರೆ ಮನೆ, ಅಡಿಗೆ ಮನೆ, ಕುದುರೆ ಲಾಯ ಇವೂ ಇವೆ. ಸಾಕಾದಷ್ಟು ಪಿಂಗಾಣಿಯ ಊಟದ ತಟ್ಟೆಗಳು, ಗ್ಲಾಸುಗಳು, ಚಂಚ ಫೋರ್ಕುಗಳು, ಸ್ನಾನಕ್ಕೆ ಮತ್ತು ಅಡಿಗೆಗೆ ಬೇಕಾಗೋ ಪಾತ್ರೆಪದಾರ್ಥಗಳು ಇವೆಲ್ಲಾ ಇವೆ. ಅಲ್ಲಿ ಸೌದೆ ಕೂಡ ಕ್ರಯಕ್ಕೆ ದೊರೆಯುತ್ತದೆ. ಊಟದ ಸಾಮಾನುಗಳನ್ನು ಮಾತ್ರ ಹತ್ತಿರದ ಹಳ್ಳಿಯಿಂದ ಕೊಂಡುಕೊಂಡು ಬರಬೇಕು.

ನಾನು ಸಂಕಲ್ಪಮಾಡಿಕೊಂಡಿದ್ದೆ: "ಸಾಧ್ಯವಾದರೆ ನನ್ನ ಇಡೀ ಯಾತ್ರೆಯನ್ನು – ಅಲ್ಮೋರದಿಂದ ಅಲ್ಮೋರಕ್ಕೆ — ಕಾಲು ನಡಿಗೆಯಲ್ಲೇ ಮಾಡಬೇಕು" ಎಂಬುದಾಗಿ. ಭಗವಂತನ ಕೃಪೆಯಿಂದ ಅದರಲ್ಲೇನೊ ಜಯಶೀಲನಾದೆ. ಆಗ ಅತ್ಯಾವಶ್ಯಕವಾದ ಕೆಲವು ವಸ್ತುಗಳನ್ನು

ದಾರಿಯ ಉದ್ದಕ್ಕೂ ನಾನು ಹೊರಬೇಕಾಯಿತು. ಎಡಗೈಯಲ್ಲಿ ಛತ್ರಿ ಬಲಗೈಯಲ್ಲಿ ವಾಕಿಂಗ್ ಸ್ಟಿಕ್ ಹಿಡಿದು ಎಡ ಭುಜದ ಮೇಲೆ ಮೂರೂವರೆ ಪೌಂಡು ತೂಕದ ಮಳೆ ಕೋಟನ್ನು ಹಾಕಿಕೊಳ್ಳುತ್ತಿದ್ದೆ. ನನಗೆ ಅತ್ಯಾವಶ್ಯಕವಾಗಿ ಬೇಕಾಗುವ ಸಾಮಾನುಗಳನ್ನುಳ್ಳ ಒಂದು ಪ್ರವಾಸಿ ಚೀಲವನ್ನು ಎಡ ಭುಜದಿಂದ ಬಲ ಸೊಂಟದ ಕಡೆಗೆ ತೂಗಹಾಕುತ್ತಿದ್ದೆ. ಅದು ನಾಲ್ಕೂವರೆ ಪೌಂಡು ತೂಗುತ್ತಿತ್ತು. ಒಂದು ಮಿಲಿಟರಿಯ ನೀರಿನ ಚೀಲವನ್ನು ಬಲ ಭುಜದಿಂದ ಎಡ ಸೊಂಟದ ಕಡೆಗೆ ನೇತುಹಾಕುತ್ತಿದ್ದೆ. ನೀರಿನೊಡನೆ ಅದು ತೂಗುತ್ತಿತ್ತು ನಾಲ್ಕು ಪೌಂಡನ್ನು. ಒಟ್ಟು ನನ್ನ ದೇಹದಮೇಲೆ ಸುಮಾರು ಹನ್ನೆರಡು ಪೌಂಡು ತೂಕದ ಸಾಮಾನುಗಳ ಭಾರ.

ನಮ್ಮ ಸೇವಕರೂ ಸ್ವಲ್ಪ ವಿಶ್ರಮಿಸಿಕೊಂಡು ಅಡಿಗೆಗೆ ಶುರು ಮಾಡಿದರು. ಇದೇ ನಮ್ಮ ಯಾತ್ರೆಯ ಮೊದಲನೆ ದಿನದ ಅಡಿಗೆಯಾದ್ದರಿಂದ ಎಲ್ಲವನ್ನೂ ಸರಿಪಡಿಸಿಕೊಂಡು ಅಡಿಗೆ ಮುಗಿಸಲು ಸ್ವಲ್ಪ ಹೆಚ್ಚು ಸಮಯವೇ ಹಿಡಿದು ರಾತ್ರಿ ೭ ಘಂಟೆಗೆ ಅಡಿಗೆ ಮುಗಿಯಿತು. ಅನ್ನ, ತೋವೆ, ಆಲೂಗಡ್ಡೆ ಈರುಳ್ಳಿ ಪಲ್ಯ ತಯಾರಾದುವು. ಇಂದಿನಿಂದ ನಮ್ಮ ಪ್ರಯಾಣ ಮುಗಿಯುವವರೆಗೆ ಎಲ್ಲೋ ಒಂದೊಂದು ದಿನ ವಿನಾ ನಿತ್ಯವೂ ತಪ್ಪದೆ ಇದೇ ತರದ ಪಲ್ಯ. ದಾರಿಯಲ್ಲಿ ಒಂದು ದಿನ ಒಂದು ಸೀಗುಂಬಳ ಕಾಯಿ ವಿನಾ ಬೇರೆ ಯಾವ ವಿಧದ ಕಾಯಿಪಲ್ಯವೂ ದೊರೆಯಲಿಲ್ಲ. ನಮ್ಮ ಗುಂಪಿನ ಮುಖ್ಯಸ್ಥರು ಹೇಳುತ್ತಿದ್ದರು: "ಸ್ವಾಮಿಜಿ, ನಾನು ನನ್ನ ಉಳಿದ ಜೀವನದಲ್ಲಿ ತಿನ್ನಬೇಕಾಗಿರುವ ಆಲೂಗಡ್ಡೆಯ ಕೋಟಾ ಎಲ್ಲಾ ಈ ಯಾತ್ರೆಯೊಳಗೇ ಮುಗಿದುಹೋಗಿ ಬಿಡುತ್ತದೆ" ಎಂದು. ಊಟ ಮುಗಿಸಿ ಸ್ವಲ್ಪ ಹೊತ್ತು ಮಾತುಕತೆ ಆಡುತ್ತಿದ್ದು ಭಗವಂತನನ್ನು ಸ್ಮರಿಸಿಕೊಂಡು ಮಲಗಿಕೊಂಡೆವು.

## ಧೌಲೆಚಿನದಿಂದ ಗನ್ಯೆಗೆ

**೬,೦೦೦ ಅಡಿ ಎತ್ತರದಿಂದ ಅದೇ ಎತ್ತರಕ್ಕೆ. ದೂರ ೧೬ ೧/೨ ಮೈಲಿ**
**ಪ್ರಯಾಣ ಪ್ರಾತಃಕಾಲ ೬-೪೫ ರಿಂದ ರಾತ್ರಿ ೮ ರ ವರೆಗೆ.**

**ತಾ|| ೨-೬-'೫೧ ಶನಿವಾರ.**

ನಮ್ಮ ಗುಂಪಿನವರಲ್ಲಿ ಒಬ್ಬರು ಡಾರ್ಜಲಿಂಗಿನಿಂದ ಬಂದಿದ್ದ ಒಬ್ಬ ಫೋಟಾಗ್ರಫರ್. ಅವರು ನಮ್ಮ ಯಾತ್ರೆಯಲ್ಲಿ ಮುಖ್ಯ ಮುಖ್ಯವಾದ

ಸ್ಥಳಗಳಲ್ಲೆಲ್ಲಾ ಸಿನಿಮ್ಯಾಟೊಗ್ರಾಫ್ ಫೋಟೋಗಳನ್ನು ತೆಗೆದುಕೊಂಡರು. ಅವರು ಸಾಕಾದಷ್ಟು ಸಾಮಾನ್ಯ ಮತ್ತು ಕಲರ್ಡ್ ಫಿಲ್ಮ್ ರೋಲುಗಳನ್ನು ತಂದಿದ್ದರು. ತಮ್ಮ ಫೋಟಾಗ್ರಫಿ ಸಾಮಾನು ಹೊರಲು ಡಾರ್ಜಲಿಂಗ್ ನಿಂದಲೇ ಒಬ್ಬ ಸೇವಕನನ್ನು ಕರೆದುಕೊಂಡು ಬಂದಿದ್ದರು. ಅವರು ಇಂದಿನಿಂದ ತಮ್ಮ ಕಾರ್ಯಕ್ಕೆ ಕೈ ಹಚ್ಚಿದರು.

ಈ ದಿನದ ದಾರಿ ಸೆರಾಘಾಟಿನ ವರೆಗೆ ಅಷ್ಟು ಪ್ರಯಾಸವಾದು ದಾಗೇನೂ ಇರಲಿಲ್ಲ. ೧೨–೩೦ ಕ್ಕೆ ಜೋರಾಗೇ ಮಳೆ ಬಂತು. ಆಗ ಸ್ವಲ್ಪ ಮರೆಯಲ್ಲಿ ಕುಳಿತಿದ್ದು ೧–೩೦ ಕ್ಕೆ ಸೆರಾಘಾಟನ್ನು ತಲುಪಿದೆವು. ಇದರ ಬಳಿ ಸರಯೂ ನದಿ ಹರಿಯುತ್ತಿದೆ. ಅದಕ್ಕೆ ಒಂದು ತೂಗು ಸೇತುವೆ ಹಾಕಿದಾರೆ. ಪ್ರಕೃತಿಸೌಂದರ್ಯ ಇಲ್ಲಿ ಬಹಳ ರಮ್ಯವಾಗಿದೆ.

ಸರಯೂ ನದಿ ಕಣ್ಣಿಗೆ ಬಿದ್ದೊಡನೆ ನನಗೆ ಶ್ರೀರಾಮಚಂದ್ರನ ನೆನಪು ಬಂತು. ಶ್ರೀರಾಮಚಂದ್ರನ ವನವಾಸ, ಗುಹ ದೋಣಿ ನಡೆಸಿದ್ದು ಕೊನೆಗೆ ಇಡೀ ರಾಮಾಯಣದ ಚಿತ್ರವೇ ನನ್ನ ಮನಸ್ಸಿನ ಮುಂದೆ ಬಂದು ನಿಂತಿತು. ಸ್ವಲ್ಪ ಕಾಲ ಭಾವನಾರಾಜ್ಯದಲ್ಲಿ ಮುಳುಗಿಹೋದೆ. ಬಳಿಕ ಮೈ ತಿಳಿದು ಮುಂದುವರಿದು ನದಿಯ ಹತ್ತಿರಕ್ಕೆ ಬಂದೆ. ಆಗ ಅನಿಸಿತು : “ ಈ ಪವಿತ್ರ ನದಿಯಲ್ಲಿ ಸ್ನಾನಮಾಡಿ ಮುಂದಕ್ಕೆ ತೆರಳಬೇಕು ” ಎಂಬು ದಾಗಿ. ಸ್ವಲ್ಪ ಹೊತ್ತು ವಿಶ್ರಮಿಸಿಕೊಂಡು ಸ್ನಾನ ಮಾಡುವುದರಲ್ಲಿ ೨–೩೦ ಆಯಿತು. ನಮ್ಮ ಗುಂಪಿನವರು ನನಗೆ ಬೇಕಾಗುವ ಆಹಾರ ವನ್ನು ಬಡಿಸಿ ಮುಂದಿನ ಪ್ರಯಾಣಕ್ಕೆ ಸಿದ್ಧರಾದರು. ನಾನು ಅವರಿಗೆ ಹೇಳಿದೆ : “ ನಾನು ಈ ಪವಿತ್ರ ನದಿಯ ದಡದಲ್ಲಿ ಸ್ವಲ್ಪ ಹೊತ್ತನ್ನು ಕಳೆಯಬೇಕೆಂದಿದೇನೆ. ನೀವು ದಯವಿಟ್ಟು ಮುಂದುವರಿಯಿರಿ. ನಾಲ್ಕು ಘಂಟೆಯ ಸಮಯಕ್ಕೆ ಈ ಜಾಗವನ್ನು ಬಿಟ್ಟು ಸಕಾಲಕ್ಕೆ ಗನ್ಯೆ ತಲುಪು ತ್ತೇನೆ. ” ಅದಕ್ಕೆ ಅವರು ಒಪ್ಪಿ ತಮ್ಮ ಪ್ರಯಾಣವನ್ನು ಮುಂದುವರಿ ಸಿದರು.

ಊಟ ಮುಗಿಸಿ ಶ್ರೀರಾಮಚಂದ್ರನ ಅದ್ಭುತ ಜೀವನದ ಸಂಬಂಧ ವಾಗಿ ಕನವರಿಸುತ್ತಾ ಒಂದು ಅಂಗಡಿಯಲ್ಲಿ ವಿಶ್ರಮಿಸಿಕೊಳ್ಳಲಾರಂಭಿಸಿದೆ. ಆತ ಎಂಥ ಅದ್ಭುತ ಆದರ್ಶ ಪುತ್ರ ! ಆದರ್ಶ ಸಹೋದರ ! ಆದರ್ಶ ಮಿತ್ರ ! ಆದರ್ಶ ಪತಿ ! ಆದರ್ಶ ಗೃಹಸ್ಥ ! ಆದರ್ಶ ಶಿಷ್ಯ ರಕ್ಷಕ, ದುಷ್ಟ ಸಂಹಾರಕ !

ಆದರ್ಶ ದೊರೆ! ಆದರ್ಶ ಮಾನವ! ಈ ಭಾವನೆಗಳೆಲ್ಲಾ ಒಂದಾದ ಮೇಲೆ ಒಂದು ಮನಸ್ಸಿನಲ್ಲಿ ಬಂದುಹೋಗಲಾರಂಭಿಸಿದವು. ಅಷ್ಟರಲ್ಲಿ ಆಗಲೇ ಸಮಯ ಆಗಿಬಿಟ್ಟದ್ದರಿಂದ ಎದ್ದು ಹೊರಟೆ.

ನದಿಯನ್ನು ದಾಟಬೇಕಾಗಿ ಬಂದಾಗಲೆಲ್ಲಾ ನಾವು ಅದರ ಓಡೆ ಎಷ್ಟೇ ಎತ್ತರದಲ್ಲಿದ್ದರೂ ತೂಗು ಸೇತುವೆ ಹಾಕಿರುವ ಮಟ್ಟಕ್ಕೆ ಇಳಿದು ಬಂದು ಅದನ್ನು ದಾಟಿದ ನಂತರ ಮತ್ತೆ ಎದುರು ಓಡೆಯಲ್ಲಿ ಅದೇ ಮಟ್ಟಕ್ಕೆ ಒಮ್ಮೊಮ್ಮೆ ಇನ್ನೂ ಅಧಿಕ ಎತ್ತರಕ್ಕೆ ಹತ್ತಬೇಕಾಗುತ್ತದೆ. ಈಗ ನಾನು ಈ ತೂಗು ಸೇತುವೆಯಿಂದ ಬಹಳ ಎತ್ತರಕ್ಕೆ ಹತ್ತಬೇಕಾಯಿತು. ಜೊತೆಗೆ ದಟ್ಟವಾದ ಕಾಡು ಬೇರೆ. ಮುಂದುವರಿಯುತ್ತ ಮುಂದುವರಿಯುತ್ತ ಕಾಡಿನ ಭಯವೂ ಹೃದಯದ ಆಳ ಆಳವನ್ನು ಹೊಗಲಾರಂಭಿಸಿತು. ಆದರೆ ಒಂದು ಕಡೆ ಸಾಕಾಗಿ ಸ್ವಲ್ಪ ಹೊತ್ತು ನಿಂತುಕೊಂಡಿರುವಾಗ ಒಬ್ಬ ವ್ಯಕ್ತಿ ಹಿಂದಿನಿಂದ ಬಂದು ನನ್ನನ್ನು ಸಮೀಪಿಸಿದ. ಆತ ಗೌರವಯುತವಾಗಿ ನನ್ನೊಡನೆ ಮಾತನಾಡುತ್ತ ಹೇಳಿದ: "ಸ್ವಾಮಿಜಿ, ನನ್ನ ಹಳ್ಳಿ ಇದೇ ದಾರಿಯಲ್ಲಿ ಇನ್ನೂ ಎರಡು ಮೈಲಿ ದೂರದಲ್ಲಿದೆ. ನಿಮಗೆ ಸಾಕಾಗಿರುವ ಹಾಗೆ ಕಾಣುತ್ತೆ. ಅಲ್ಲಿಯವರೆಗೆ ನಿಮ್ಮ ಹೆಗಲ ಮೇಲಿನ ಚೀಲವನ್ನು ಬೇಕಾದರೆ ಹೊತ್ತುತರುತ್ತೇನೆ." ದಣಿದಿದ್ದ ಶರೀರವೇನೊ ಹೇಳಿತು: "ಕೊಡು" ಅಂತ. ಆದರೆ ವ್ಯವಹಾರಿಕ ಮನಸ್ಸು ಅಡ್ಡಲಾಗಿ ಬಂದು ಹೇಳಿತು: "ಹಾಗೆ ಮಾಡುವುದು ಹುಚ್ಚುತನ. ಆತನೇನಾದರೂ ಅದನ್ನು ತೆಗೆದುಕೊಂಡು ಕಾಡಿನೊಳಕ್ಕೆ ನುಗ್ಗಿ ತಪ್ಪಿಸಿಕೊಂಡುಬಿಟ್ಟರೆ ಏನುಮಾಡುತ್ತೀಯೆ? ನಿನಗೆ ತತ್‌ಕ್ಷಣ ಬೇಕಾಗುವ ವಸ್ತುಗಳೆಲ್ಲಾ ಅದರಲ್ಲಿ ಇವೆ. ಜೊತೆಗೆ ಕ್ಯಾಮರಾ, ಫಿಲ್ಮ್ ರೋಲು ಇವೂ ಅದರಲ್ಲಿವೆ. ಈತ ನಂಬಿಕಸ್ತನಾಗಿಯೂ, ಭಕ್ತನಾಗಿಯೂ ತೋರುತ್ತಿದ್ದರೂ ಈತನ ಕೈಗೆ ಚೀಲವನ್ನು ಕೊಡುವುದು ಯುಕ್ತವಲ್ಲ. ಆಮೇಲೆ ಏನಾದರೂ ಆದರೆ ಬಾಯಿ ಬಾಯಿ ಬಿಡಬೇಕಾಗುತ್ತೆ ಜೋಕೆ!" ಎಂದು. ವ್ಯಾವಹಾರಿಕ ಮನಸ್ಸು ಕೊಟ್ಟ ಎಚ್ಚರಿಕೆಗೆ ಮನ್ನಣೆಕೊಟ್ಟು ಆತನಿಗೆ ಹೇಳಿದೆ: "ಈ ಚೀಲ ಅಷ್ಟೇನು ಭಾರವಾಗಿಲ್ಲ. ನೀನು ನನಗೆ ಸಹಾಯ ಮಾಡಲು ಮುಂದೆ ಬಂದುದಕ್ಕಾಗಿ ನಿನಗೆ ಅನಂತ ವಂದನೆಗಳು." ಆತ ಸುಮ್ಮನಾಗಿ ನನ್ನ ಹಿಂದೇ ಬರಲಾರಂಭಿಸಿದ. ಆತ ನನ್ನನ್ನು ಬಿಟು

ಕಣ್ಮರೆಯಾಗುವವರೆಗೆ "ಈತ ಎಂಥವನೊ?" ಎಂಬ ಭಯ ನನ್ನ ಹೃದಯವನ್ನು ಮೀಟುತ್ತಲೇ ಇತ್ತು.

ಆ ತಿಟ್ಟನ್ನು ಹತ್ತಿದನಂತರ ಸ್ವಲ್ಪ ಮಟ್ಟವಾದ ರಸ್ತೆ ಸಿಕ್ಕಿತು. ಅದರ ಬಲಭಾಗಕ್ಕೆ ಪಡಿ ಪಡಿಯಾಗಿ ಹಬ್ಬಿರುವ ಹೊಲಗಳ ಒಂದು ವಿಸ್ತಾರವಾದ ಬಯಲು ಕಂಡಿತು. ಗೋಧಿ ಸುಮ್ಮನೆ ಬೆಳೆದುನಿಂತಿತ್ತು. ಇಲ್ಲಿಯವರೆಗೂ ನನ್ನ ಹೃದಯವನ್ನು ಮೀಟುತ್ತಿದ್ದ ಕಾಡಿನ ಭಯ ಅದನ್ನು ನೋಡಿದೊಡನೆ ಎಷ್ಟೋ ಕಡಮೆಯಾಗಿಹೋಯಿತು. ಆ ಆನಂದದ ದೃಶ್ಯ ನೋಡುತ್ತ ನೋಡುತ್ತ ಮುಂದುವರಿಯಲಾರಂಭಿಸಿದೆ. ಮುಚ್ಚಂಜೆಯಾಗಲಾರಂಭಿಸಿತು. ಅಲ್ಲಲ್ಲಿ ಹಿಂದಿನ ವರ್ಷ ಬಿದ್ದ ವಿಪರೀತ ಮಳೆಯಿಂದ ರಸ್ತೆ ಕೊಚ್ಚಿಹೋಗಿತ್ತು. ಬಹಳ ಎಚ್ಚರಿಕೆಯಿಂದ ಕಾಲು ಹಾಕಬೇಕಾಗಿ ಬಂತು. ಇನ್ನೊಂದು ತಿಟ್ಟನ್ನು ಹತ್ತಿ ಕೊನೆಗೆ ರಾತ್ರಿ ೭ ಘಂಟೆ ಸಮಯಕ್ಕೆ ಗನ್ಸೆಯನ್ನು ತಲುಪಿದೆ. ಅಷ್ಟರಲ್ಲಿ ಬಹಳ ಸಾಕಾಗಿ ಹೋಗಿತ್ತು. ನಮ್ಮ ಗುಂಪಿನವರು ಹತ್ತಿರವೇ ಇದ್ದ ಒಂದು ಚಿಲುಮೆ ಯಿಂದ ನೀರು ತೆಗೆದುಕೊಳ್ಳುತ್ತಿದ್ದುದು ಕಣ್ಣಿಗೆ ಬಿತ್ತು. ಆಗ ಅನಿಸಿತು: "ಅಬ್ಬಬ್ಬ! ಹೇಗೋ ಮಾಡಿ ಇಂದು ಗುರಿ ಸೇರಿಬಿಟ್ಟೆನಲ್ಲ!" ಎಂದು. ನಮ್ಮ ಗುಂಪಿನವರನ್ನು ಸಮೀಪಿಸಿ ಕೇಳಿದೆ: "ಎಲ್ಲಿದೆ ಅರಣ್ಯಶಾಖೆಯ ವಿಶ್ರಾಂತಿ ಗೃಹ?" ಅವರು ಹೇಳಿದರು: "ಸ್ವಾಮಿಜೀ, ಒಂದೂವರೆ ಮೈಲಿ ದೂರ ಇಲ್ಲಿಂದ. ಅಲ್ಲಿ ಒಂದು ತೊಟ್ಟು ನೀರೂ ಇಲ್ಲ. ಇಲ್ಲಿಂದ ನೀರು ತೆಗೆದುಕೊಂಡು ಹೋಗಬೇಕಾಗಿದೆ. ದಯವಿಟ್ಟು ಕೈಕಾಲು ತೊಳೆದುಕೊಂಡು ನಿಮ್ಮ ನೀರಿನ ಚೀಲಕ್ಕೂ ಸ್ವಲ್ಪ ನೀರು ತುಂಬಿಕೊಳ್ಳಿ." ಆಗಲೇ ದಣಿದಿದ್ದ ಶರೀರ ಇನ್ನೂ ಒಂದೂವರೆ ಮೈಲಿ ನಡೆಯಬೇಕು ಎಂಬುದನ್ನು ಕೇಳಿ "ಉಸ್ ಅಪ್ಪಾ!" ಎಂದಿತು. ಆದರೆ ಮನಸ್ಸು ಸುಮ್ಮನೆ ಬಿಡುವುದೆ? ಅದು ಬಾರುಕೋಲು ಹಿಡಿದು ನಿಂತಿತು. ಶರೀರ ಹೆದರಿ ಹೇಗೋ ಕಷ್ಟವನ್ನೆಲ್ಲಾ ಸಹಿಸಿಕೊಂಡು ಅರಣ್ಯಶಾಖೆಯ ವಿಶ್ರಾಂತಿ ಗೃಹವನ್ನು ಮುಟ್ಟಿಬಿಟ್ಟಿತು. ಒಡನೆಯೆ ಸ್ವಾಮಿ ವಿವೇಕಾ ನಂದರ ಪರ್ಯಟನೆಯ ಸಮಯದಲ್ಲಿನ ಒಂದು ಘಟನೆ ಜ್ಞಾಪಕಕ್ಕೆ ಬಂತು. ಅವರು ತಮ್ಮ ಪರ್ಯಟನೆಯ ಸಮಯದಲ್ಲಿ ಆಹಾರಕ್ಕಾಗಲಿ ಮತ್ತೆ ಬೇರೆ ಯಾವುದಕ್ಕಾಗಲಿ ಯಾರನ್ನೂ ಕೇಳುತ್ತಿರಲಿಲ್ಲ. ಭಗವಂತ

ತಾನಾಗೇ ಕಳುಹಿಸುತ್ತಿದ್ದುದನ್ನು ಮಾತ್ರ ತಿನ್ನುತ್ತಿದ್ದರು. ಒಮ್ಮೆ ಮೂರು ದಿನಗಳವರೆಗೆ ಏನೂ ದೊರೆಯಲಿಲ್ಲ. ನಾಲ್ಕನೆ ದಿನ ಹಸಿವನ್ನು ತಾಳಲಾರದೆ ಒಂದು ಹೆಜ್ಜೆಯನ್ನೂ ಮುಂದಕ್ಕೆ ಹಾಕಲು ಸಾಮರ್ಥ್ಯವಿಲ್ಲದವರಾಗಿ ಒಂದು ಕಡೆ ಮಲಗಿಕೊಂಡರು. ಆಗ ಅವರಿಗೆ ಅನಿಸಿತು— ತಾವು ಈ ಶರೀರವಲ್ಲ, ಆತ್ಮ ಎಂಬದಾಗಿ. ಒಡನೆಯೇ ಶರೀರಕ್ಕೆ ಆಜ್ಞೆ ಮಾಡಿದರಂತೆ ಯಾವುದೊ ಒಂದು ಸ್ಥಳಕ್ಕೆ ಅದು ಮುಂದುವರಿಯಲೇ ಬೇಕು ಎಂಬುದಾಗಿ. ಅದು ಹಾಗೇ ಮಾಡಿತಂತೆ ದೇಹ ಮನಸ್ಸಿನ ದಾಸ, ಮನಸ್ಸು ಆತ್ಮದ ದಾಸ. ಆತ್ಮಬಲವೊಂದು ಇತ್ತು ಎಂದರೆ ಈ ಜಗತ್ತಿನಲ್ಲಿ ಏನನ್ನು ಬೇಕಾದರೂ ಸಾಧಿಸಬಹುದು. ಈ ಜನ್ಮದಲ್ಲೇ ಮುಕ್ತಿಯನ್ನೂ ಗಳಿಸಿಕೊಳ್ಳಬಹುದು.

ಅರಣ್ಯಶಾಖೆಯ ವಿಶ್ರಾಂತಿ ಗೃಹಗಳಲ್ಲಿ ಒಂದು ವೈಶಿಷ್ಟ್ಯವಿದೆ. ಅವನ್ನು ಆದಷ್ಟು ಊರಿಗಿಂತ ಎತ್ತರವಾದ ಪ್ರದೇಶದಲ್ಲಿ ಮತ್ತು ಸೊಗಸಾದ ಹಿಮಾಲಯ ಶ್ರೇಣಿಯ ದೃಶ್ಯ ಕಾಣಬರುವ ಜಾಗದಲ್ಲಿ ಕಟ್ಟಿದಾರೆ. ಅವರು ನೀರಿನ ಸೌಕರ್ಯಕ್ಕಾಗಿ ಅಷ್ಟು ಹೆಚ್ಚಾಗಿ ಗಮನ ಕೊಟ್ಟಿರುವಂತೆ ನನಗೆ ತೋರಿಬರಲಿಲ್ಲ. ಇಲ್ಲಿನ ವಿಶ್ರಾಂತಿ ಗೃಹ ಅರಣ್ಯದ ಮಧ್ಯೆ ಬಹಳ ಸೊಗಸಾದ ಜಾಗದಲ್ಲಿ ಇದೆ. ಒಳ್ಳೆ ಹಿಮಾಲಯ ಶ್ರೇಣಿಯ ದೃಶ್ಯವೂ ಇಲ್ಲಿಂದ ಕಂಡು ಬರುತ್ತದೆ.

## ಗನ್ನೆನಿಂದ ಬೆರಿನಾಗಿಗೆ

೬,೦೦೦ ಅಡಿ ಎತ್ತರದಿಂದ ೭,೦೦೦ ಅಡಿ ಎತ್ತರಕ್ಕೆ. ದೂರ ೧೧ ಮೈಲಿ

ಪ್ರಯಾಣ ಬೆಳಗಿನ ೯ ರಿಂದ ಸಾಯಂಕಾಲ ೬ ರ ವರೆಗೆ.

ತಾ|| ೩-೬-'೫೧, ಭಾನುವಾರ.

ಈ ದಿನದ ದಾರಿ ಸ್ವಲ್ಪ ಕಷ್ಟಕರವಾದ್ದೆ. ಆಗಾಗ ಹಳ್ಳ ತಿಟ್ಟುಗಳನ್ನು ಇಳಿದೂ ಹತ್ತಿ ಮಾಡಬೇಕಾಯಿತು. ಅಪರಾಹ್ಣದಲ್ಲಿ ಬಹಳ ಕಡಿದಾದ ಒಂದು ತಿಟ್ಟನ್ನು ಸುಮಾರು ಎರಡು ಮೈಲಿ ದೂರದವರೆಗೆ ಸುಮ್ಮನೆ ಹತ್ತುತ್ತಲೇ ಹೋಗಬೇಕಾಯಿತು. ದಾರಿ ಆ ತಿಟ್ಟನ್ನು ಸುತ್ತುತ್ತ ಸುತ್ತುತ್ತ ಮುಂದುವರಿಯುತ್ತಿತ್ತು. ಪ್ರತಿಯೊಂದು ತಿರುವಿನಲ್ಲೂ ತೋರುತ್ತಿತ್ತು ಎದುರಿಗೆ ಕಾಣುವ ಎತ್ತರವನ್ನು ಹತ್ತಿಬಿಟ್ಟರೆ ಬಳಿಕ ಮಟ್ಟವಾದ ರಸ್ತೆ ಸಿಕ್ಕಬಹುದು ಎಂಬುದಾಗಿ. ಅಲ್ಲಿಗೆ ಹೋಯಿತು ಎಂದರೆ ಮತ್ತೆ

ಇನ್ನೂ ಎತ್ತರಕ್ಕೆ ನಾವು ಹತ್ತಬೇಕಾಗಿರುವ ಪ್ರದೇಶ ಕಣ್ಣಿಗೆ ಕಾಣಿಸಿ ಕೊಳ್ಳುತ್ತಿತ್ತು. ನಾವು ಎರಡು ಮೈಲಿ ದೂರ ಹತ್ತುವವರೆಗೆ ಪ್ರತಿಯೊಂದು ತಿರುವಿನಲ್ಲೂ ಇದೇ ರೀತಿಯಾಗಿ ಮೋಸಹೋಗುತ್ತಿದ್ದೆವು. ಸಾಲದುದಕ್ಕೆ ಮಳೆ ಬೇರೆ ಹೊಯ್ಯಲಾರಂಭಿಸಿತು. ಒಂದೊಂದು ಜಾಗದಲ್ಲಿ ರಸ್ತೆ ಬಹಳ ವಾಗಿ ಕುಸಿದುಹೋಗಿಬಿಟ್ಟಿತ್ತು. ನಾವು ಕಾಲಿಟ್ಟರೆ ಮತ್ತೆ ದಾರಿ ಎಲ್ಲಿ ಕುಸಿದು ಬೀಳುವುದೋ ಎಂಬಂತೆ ತೋರುತ್ತಿತ್ತು. ಪ್ರಾಣವನ್ನು ಕೈಯಲ್ಲಿ ಇಟ್ಟುಕೊಂಡು, ಅಂಥ ಒಂದು ಜಾಗದಿಂದ ಪಾರಾದೆವು ಎನ್ನುವಷ್ಟರಲ್ಲೇ ಮತ್ತೆ ಸ್ವಲ್ಪ ದೂರದಲ್ಲಿ ಇನ್ನೊಂದು ಕಾದಿರುತ್ತಿತ್ತು. ನಾಲ್ಕೈದು ಕಡೆ ಈ ರೀತಿಯಾಗಿ ರಸ್ತೆ ಕುಸಿದುಹೋಗಿತ್ತು. ಆದರೆ ಭಗವಂತನ ಕೃಪೆಯಿಂದ ಸುರಕ್ಷಿತವಾಗಿ ಆ ಸ್ಥಳಗಳನ್ನೆಲ್ಲಾ ದಾಟಿ ಕೊನೆಗೆ ಆ ತಿಟ್ಟನ್ನು ಹತ್ತಿಯೇ ಬಿಟ್ಟೆವು. ಆಗ ನಮಗೆ ಬಹಳ ಆನಂದ ವಾಯಿತು. ಆದರೆ ಶರೀರ ಮಾತ್ರ ಬಹಳವಾಗಿ ದಣಿದುಬಿಟ್ಟಿತ್ತು. ಸ್ವಲ್ಪ ಹೊತ್ತು ವಿಶ್ರಮಿಸಿಕೊಂಡು ಅಲ್ಲಿಂದ ಎರಡೆರಡೂವರೆ ಮೈಲಿ ದೂರದಲ್ಲಿದ್ದ ಬೆರಿನಾಗಿಗೆ ಬಂದೆವು. ಭಗವಂತನ ಕೃಪೆಯಿಂದ ಆ ತಿಟ್ಟನ್ನು ಹತ್ತಿದ ನಂತರ ಸಮನಾದ ರಸ್ತೆ ದೊರಕಿತು.

ನಮ್ಮ ಗುಂಪಿನವರು ನನಗಿಂತ ಸ್ವಲ್ಪ ಮುಂದಾಗೇ ಮುಂದುವರಿದು ಊರಿನಿಂದ ಅರ್ಧ ಮೈಲಿ ದೂರದಲ್ಲಿರುವ ಅರಣ್ಯಶಾಖೆಯ ವಿಶ್ರಾಂತಿ ಗೃಹದ ಕಡೆಗೆ ತೆರಳಿದರು. ನನಗೆ ವಿಪರೀತ ಬಾಯಾರಿಕೆ ಆಗಿಬಿಟ್ಟಿತ್ತು. ಆ ಊರಿನಲ್ಲೇ ಇದ್ದ ವಿದ್ಯಾರ್ಥಿಗಳ ಹಾಸ್ಟೆಲ್ಲಿಗೆ ಹೋಗಿ ಸ್ವಲ್ಪ ಹೊತ್ತು ವಿಶ್ರಮಿಸಿಕೊಂಡು ಸಾಕಾದಷ್ಟು ಬಿಸಿನೀರು ಕುಡಿದೆ. ಆಗ ಶರೀರ ಸ್ವಲ್ಪ ಚೇತನಗೊಂಡಿತು. ಬಳಿಕ ಆ ಹುಡುಗರೊಡನೆ ಶ್ರೀರಾಮಕೃಷ್ಣರ ಸಂಬಂಧವಾಗಿ, ಸ್ವಾಮಿ ವಿವೇಕಾನಂದರ ಸಂಬಂಧವಾಗಿ ಸ್ವಲ್ಪ ಹೊತ್ತು ಮಾತುಕತೆಯಾಡುತ್ತಿದ್ದು ಆ ಊರನ್ನು ನೋಡಲು ಹೊರಕ್ಕೆ ಬಂದೆ. ಅದು ಒಂದು ದೊಡ್ಡ ಊರೇ. ಅಲ್ಲಿ ಹೈಸ್ಕೂಲೂ ಇದೆ. ಟೀ ತೋಟ ಬೇರೆ ಇವೆ. ಅಲ್ಲಿನ ಅರಣ್ಯ ಶಾಖೆಯ ವಿಶ್ರಾಂತಿ ಗೃಹವಂತೂ ಬಹಳ ರಮ್ಯವಾದ ಜಾಗದಲ್ಲಿದೆ. ಅಲ್ಲಿಂದ ಹಿಮಾಲಯದ ದೃಶ್ಯ ಅತ್ಯಂತ ಸುಂದರವಾಗಿ ಕಾಣುತ್ತದೆ. ಕೇದಾರನಾಥ ಬದರೀನಾಥ ಶಿಖರಗಳಿಂದ ಹಿಡಿದು ಪಂಚ ಚೂಲಿಯ ವರೆಗಿನ ಶಿಖರಗಳೆಲ್ಲಾ ಬಹಳ ಸ್ಪಷ್ಟವಾಗಿ ಕಾಣ ಬರುತ್ತವೆ.

## ಬೆರಿನಾಗಿನಿಂದ ಥಾಲಿಗೆ

೭,೦೦೦ ಅಡಿ ಎತ್ತರದಿಂದ ೩,೦೦೦ ಅಡಿ ಎತ್ತರಕ್ಕೆ. ದೂರ ೧೦ ಮೈಲಿ.
ಪ್ರಯಾಣ ಬೆಳಗಿನ ೮-೩೦ ರಿಂದ ಅಪರಾಹ್ಣ ೨-೪೫ ರ ವರೆಗೆ.
ತಾ|| ೪-೬-'೫೧, ಸೋಮವಾರ.

ಥಾಲಿನ ಹತ್ತಿರ ಎಲ್ಲೊ ಒಂದು ಕಿಂಚಿತ್ ದೂರ ಹತ್ತುವುದನ್ನು ಬಿಟ್ಟರೆ ಇಂದಿನ ದಾರಿಯಲ್ಲಿ ಉದ್ದಕ್ಕೂ ಇಳಿದು ಹೋಗುವ ಕೆಲಸವೇ. ಉದ್ದಕ್ಕೂ ದಟ್ಟವಾದ ಕಾಡು. ದೇವದಾರು (ಶಂಕು ವೃಕ್ಷ) ವೃಕ್ಷಗಳ ತರಗು ದಾರಿಯ ಮೇಲೆಲ್ಲಾ ಸುಪ್ಪತ್ತಿಗೆಯೋಪಾದಿಯಲ್ಲಿ ಬಿದ್ದಿತ್ತು-ಒಮ್ಮೊಮ್ಮೆ ಕಾಲು ಹೂತುಹೋಗುವಷ್ಟು ಮಂದವಾಗಿ. ಇಂದಿನ ದಾರಿಯ ವೈಶಿಷ್ಟ್ಯವೇನೆಂದರೆ, ರಸ್ತೆಯ ಮೇಲೆ ಬಿದ್ದಿದ್ದ ಎಲೆಗಳು ಕೊಳೆತು ಅವು ಜಿಗುಣೆಯ ತೌರುಮನೆಯಾಗಿಬಿಟ್ಟಿದ್ದುವು. ಮಳೆಗಾಲ ದಲ್ಲಂತೂ ಈ ರಸ್ತೆ ಜಿಗುಣೆ ಹಾಸಿದ ರಸ್ತೆಯೇ ಆಗಿಬಿಡುವುದಂತೆ! ಈಗ ಅವು ನಮಗೆ ಸುಸ್ವಾಗತ ನೀಡಿ ನಮಗರಿವೇ ಆಗದ ರೀತಿಯಲ್ಲಿ ನಮ್ಮ ರಕ್ತ ಹೀರಿ ಬೀಳ್ಕೊಡಲು ಸಿದ್ಧವಾಗಿ ತರಗೆಲೆಗಳ ಮೇಲೆ ಕುಳಿತಿದ್ದುವು. ಆದ್ದರಿಂದ ಅವುಗಳ ಈ ವಿಧದ ಸುಸ್ವಾಗತದಿಂದ ತಪ್ಪಿಸಿ ಕೊಳ್ಳಲು ಬಹಳ ಎಚ್ಚರಿಕೆಯಿಂದ ಕಾಲು ಇಡಬೇಕಾಗಿತ್ತು.

ಥಾಲನ್ನು ಸಮೀಪಿಸುವ ಮುನ್ನ ರಸ್ತೆ ಇಬ್ಭಾಗವಾಗಿ ಕವಲೊಡೆಯು ತ್ತದೆ. ಒಂದು ದಾರಿ ನಾವು ಬರುತ್ತಿದ್ದ ಮಟ್ಟದಲ್ಲೇ ನೇರವಾಗಿ ಮುಂದುವರಿದು ಥಾಲನ್ನು ಮುಟ್ಟುತ್ತದೆ. ಇನ್ನೊಂದು ಸ್ವಲ್ಪ ಎತ್ತರಕ್ಕೆ ಹತ್ತಿಹೋಗಿ ಕೊನೆಗೆ ಥಾಲಿಗೆ ನಾನೂರು ಅಡಿ ಎತ್ತರದಲ್ಲಿರುವ ಅರಣ್ಯ ಶಾಖೆಯ ವಿಶ್ರಾಂತಿ ಗೃಹಕ್ಕೆ ಕರೆದೊಯ್ಯುತ್ತದೆ. ನಾವು ಆ ಎತ್ತರದ ರಸ್ತೆಯಲ್ಲಿ ಮುಂದುವರಿದು ವಿಶ್ರಾಂತಿ ಗೃಹವನ್ನು ತಲುಪಿದೆವು.

ವಿಶ್ರಾಂತಿ ಗೃಹದಲ್ಲಿ ಸ್ವಲ್ಪ ಹೊತ್ತು ವಿಶ್ರಮಿಸಿಕೊಂಡನಂತರ ನಾನು ಥಾಲಿಗೆ ಇಳಿದು ಅದರ ಬಳಿಯಲ್ಲೇ ಹರಿಯುತ್ತಿರುವ ರಾಮಗಂಗೆಯಲ್ಲಿ ಸ್ನಾನಮಾಡಿದೆ. ಇದು ಕೇವಲ ಮೂರೇ ಸಾವಿರ ಅಡಿ ಎತ್ತರದಲ್ಲಿರುವುದ ರಿಂದ ಸೆಕೆ ವಿಪರೀತವಾಗಿತ್ತು. ಆದರೆ ರಾಮಗಂಗೆಯ ನೀರು ಸ್ಫಟಿಕ ದೋಪಾದಿಯಲ್ಲಿ ತಿಳಿಯಾಗಿದ್ದು ಹಿಮದೋಪಾದಿಯಲ್ಲಿ ಶೈತ್ಯದಿಂದ ಕೂಡಿತ್ತು. ಆದ್ದರಿಂದ ಇಂದಿನ ಪವಿತ್ರ ನದಿಯ ಸ್ನಾನ ಮನಸ್ಸಿಗೆ

ಬಹಳ ಆನಂದವನ್ನು ತಂದಿತು ; ಶರೀರಕ್ಕೆ ನವಚೇತನವನ್ನು ಕೊಟ್ಟಿತು ; ರಾಮನಾಮವನ್ನು ಹೊತ್ತಿದ್ದರಿಂದ ಜೀವಾತ್ಮನಿಗೆ ಆತ್ಮಬಲವನ್ನೂ ನೀಡಿತು. ಸಾಯಂಕಾಲ ೬ ಘಂಟೆಗೆ ವಿಶ್ರಾಂತಿಗೃಹಕ್ಕೆ ಹಿಂದಿರುಗಿದೆ. ಇಲ್ಲಿಂದಲೂ ನಾವು ಹಿಮ ಕವಿದಿರುವ ಬೆಟ್ಟಗಳನ್ನು ಸಾಮಾನ್ಯ ರೀತಿಯಲ್ಲಿ ನೋಡಬಹುದು. ಇಂದಿನ ಸಾಯಂಕಾಲ ಮಳೆ ಎಲ್ಲೊ ಒಂದು ನಾಲ್ಕೈದು ಹನಿಯನ್ನು ಮಾತ್ರ ಹಾಕಿತು. ಸೆಕೆ ವಿಪರೀತ. ರಾತ್ರಿಯೆಲ್ಲಾ ಬೆವರುತ್ತಲೇ ಇದ್ದೆವು.

## ಥಾಲಿನಿಂದ ಸಂದೇವಿಗೆ

೩,೦೦೦ ಅಡಿ ಎತ್ತರದಿಂದ ೬,೪೦೦ ಅಡಿ ಎತ್ತರಕ್ಕೆ. ದೂರ ೭ ೩/೪ ಮೈಲಿ.

ಪ್ರಯಾಣ ಮುಂಜಾನೆ ೫ ರಿಂದ ಬೆಳಗಿನ ೧೧-೩೦ ರ ವರೆಗೆ.

ತಾ॥ ೫-೬-'೫೧, ಮಂಗಳವಾರ.

ಇಲ್ಲಿನ ವಿಶ್ರಾಂತಿಗೃಹದಿಂದ ಹೊರಟು ರಾಮಗಂಗೆಯವರೆಗೆ ಇಳಿದು ಅದಕ್ಕೆ ಹಾಕಿರುವ ತೂಗು-ಸೇತುವೆಯನ್ನು ದಾಟಿ ನದಿಯ ಆಚೆ ದಡಕ್ಕೆ ಹೋದೆವು. ಇಲ್ಲಿಂದಾಚೆಗೆ ಒಂದು ಐದು ಮೈಲಿ ದೂರವನ್ನು ಒಂದೇ ಸಮನೆ ಹತ್ತಬೇಕು. ದಟ್ಟವಾದ ಕಾಡಿನ ಮೂಲಕವೇ ದಾರಿ. ಆದರೆ ಇದು ದೇವದಾರುವೃಕ್ಷಗಳ ಕಾಡಲ್ಲ, ಬೇರೆ ಗಿಡಗಳದು. ಈ ದಾರಿಯಲ್ಲಿ ಆಗಾಗ ಹಿಮಶ್ರೇಣಿ ಕಾಣಿಸಿಕೊಳ್ಳುತ್ತದೆ. ಕೆಲವೆಡೆಗಳಲ್ಲಿ ಅದು ಅಷ್ಟು ಮನೋಹರವಾಗಿ ಕಾಣುತ್ತದೆ; ಅನಿಸುತ್ತದೆ: "ಹಾಗೆ ನೋಡುತ್ತಲೇ ದಿವಸಗಳಾದ ಮೇಲೆ ದಿವಸಗಳನ್ನು ಇಲ್ಲೇ ಕಳೆದುಬಿಡೋಣವೇ ?"

ಪ್ರಯಾಸಪಟ್ಟು ಈ ಐದು ಮೈಲಿಗಳನ್ನೂ ಹತ್ತಿದನಂತರ ಸ್ವಲ್ಪ ದೂರದವರೆಗೆ ಮಾತ್ರ ಮಟ್ಟವಾದ ರಸ್ತೆ ಸಿಕ್ಕಿತು. ಮತ್ತೆ ನಾವು ಸಂದೇವು ದೊರೆಯುವವರೆಗೆ—ದೇವದಾರು ವೃಕ್ಷಗಳ ಕಾಡಿನ ಮೂಲಕ—ಹತ್ತುತ್ತಲೇ ಹೋದೆವು. ಇಂದಿನ ದಾರಿಯೂ ನನಗೆ ಊಟಿಯ ನೆನಪನ್ನು ತಂದಿತು.

ಇಲ್ಲಿನ ವಿಶ್ರಾಂತಿಗೃಹ ಬಹಳ ಸುಂದರವಾದ ಜಾಗದಲ್ಲಿದೆ. ಇಲ್ಲಿಂದ ಕಾಣುವ ಹಿಮಶ್ರೇಣಿಯ ದೃಶ್ಯ ಬಲು ಸೊಗಸಾಗಿದೆ. ಇದುವರೆಗಿನದನ್ನೆಲ್ಲ ಮೀರಿಸಿಬಿಟ್ಟಿರುವಂತೆ ನನಗೆ ತೋರಿತು. ಈ ಮಹಾ

ವೈಭವದ ದೃಶ್ಯ ನೋಡಿ ಮನಸ್ಸು ಸುಮ್ಮನೆ ನಲಿದಾಡಲಾರಂಭಿಸಿತು. ನಾವು ಇಂದು ಪ್ರಾತಃಕಾಲದಿಂದ ನಡೆದು ನಡೆದು ಶ್ರಮಪಟ್ಟಿದ್ದುದಕ್ಕೆ ಒಳ್ಳೆ ಫಲ ದೊರೆತಂತಾಯಿತು. ಆಗ ಅನಿಸಿತು: "ಹೌದು ನಿಜ, ಈ ಜೀವನದ ಸಂಗ್ರಾಮದಲ್ಲಿ ದುಃಖ ಕಷ್ಟ ಇವೇ ಮೊದಲಾದುವು ಬಂದೇ ಬರುತ್ತವೆ. ಅವು ಬರುವುದು, ನಮಗೆ ಸುಖದ ಮಹತ್ತನ್ನು ತೋರಿಸಲೋಸುಗವೇ. ಆದರೆ ಜೀವನದ ಸಂಗ್ರಾಮದಲ್ಲಿ ಯಶಸ್ವಿಗಳಾಗಬೇಕಾದರೆ ದುಃಖ ಕಷ್ಟಗಳು ಬಂದಾಗ ಹತಾಶರಾಗದೆ, ಕುಗ್ಗಿ ನೆಲ ಸಮವಾಗದೆ, ಆತ್ಮನಿಂದನೆ ಮಾಡಿಕೊಳ್ಳದೆ ಅವನ್ನೆಲ್ಲಾ ಎದುರಿಸಿ ಮುಂದುವರಿದರೆ ಒಳ್ಳೆ ಆನಂದದಾಯಕ ಜೀವನವನ್ನು ನಾವು ನಿಸ್ಸಂದೇಹವಾಗಿ ಹೊಂದೇ ಹೊಂದುತ್ತೇವೆ."

ಈ ಜಾಗಗಳಲ್ಲೆಲ್ಲಾ ಒಂದು ವಿಧದ ದನದ ನೊಣ ಇವೆ. ಅವು ಮನುಷ್ಯರನ್ನೂ ಕಚ್ಚಿ ರಕ್ತಹೀರಲು ಪ್ರಯತ್ನಿಸುತ್ತವೆ. ಅವು ಕಚ್ಚಿದ ಎಡೆಗಳಲ್ಲೆಲ್ಲಾ ಗಾಯಗಳಾಗಿಬಿಡುವುದರಿಂದ ಬಹಳ ಎಚ್ಚರಿಕೆಯಿಂದ ಇರಬೇಕು.

ಅಪರಾಹ್ಣ ಇಲ್ಲಿ ಒಳ್ಳೆ ಮಳೆ ಆಯಿತು. ಸಾಯಂಕಾಲ ಆಗುತ್ತ ಆಗುತ್ತ ಚಳಿ ಅಧಿಕಾಧಿಕವಾಗುತ್ತಾ ಬಂದು ಊಟಿಯ ಚಳಿಗಾಲದ ಚಳಿಯ ಹಾಗೆ ಕಂಡುಬಂದಿತು. ವಿಧಿಯಿಲ್ಲದೆ ಉಣ್ಣೆ ಬಟ್ಟೆಗಳನ್ನು ಉಪಯೋಗಿಸಬೇಕಾಗಿ ಬಂತು. ಆಗ ಅನಿಸಿತು: "ನೋಡು ಭಗವಂತನ ಸೃಷ್ಟಿಯ ವೈಚಿತ್ರ್ಯವನ್ನ! ನಿನ್ನೆ ಕೇವಲ ಎಂಟೇ ಮೈಲಿ ದೂರದಲ್ಲಿರುವ ಥಾಲಿನಲ್ಲಿ ತಡೆಯಲಾರದ ಸೆಕೆ, ಇಂದು ಇಲ್ಲಿ ಊಟಿಯ ಆರೋಗ್ಯಪ್ರದ ಚಳಿಗಾಲದ ಚಳಿ. ಕಾರಣ, ಇದು ಥಾಲಿಗಿಂತ ೩,೪೦೦ ಅಡಿ ಹೆಚ್ಚು ಎತ್ತರದಲ್ಲಿರುವುದರಿಂದ. ನಾವು ನಿಜವಾಗಿ ಮೇಲು ಮೇಲಕ್ಕೆ, ಎಂದರೆ ಭಗವಂತನ ಕಡೆಗೆ ಮುಂದುವರಿದರೆ ಥಾಲಿನಂತಿರುವ ಈ ಜಗತ್ತಿನಲ್ಲಿ ಸತ್ತು ಸುಣ್ಣವಾಗಬೇಕಾಗಿರೋದಿಲ್ಲ. ಈ ಜನ್ಮದಲ್ಲೇ ನಮ್ಮ ಸ್ವಸ್ವರೂಪವನ್ನು ಅರಿತುಕೊಂಡು ಶಾಶ್ವತವಾದ ಆನಂದವನ್ನು ಪಡೆಯಬಹುದು. ಮಾನವನ ಗುರಿಯನ್ನು ಮುಟ್ಟಬಿಡಬಹುದು. ತನಗೇ ಅಲ್ಲದೆ ಇತರರಿಗೂ ಸುಖಶಾಂತಿಯನ್ನು ದೊರಕಿಸಿಕೊಡಬಹುದು."

## ಸಂದೇವಿನಿಂದ ಆಸ್ಕೋಟಿಗೆ

೬,೪೦೦ ಅಡಿ ಎತ್ತರದಿಂದ ೫,೦೦೦ ಅಡಿ ಎತ್ತರಕ್ಕೆ ದೂರ ೯ ಮೈಲಿ.
ಪ್ರಯಾಣ ಪ್ರಾತಃಕಾಲ ೫-೪೫ ರಿಂದ ಬೆಳಗಿನ ೯-೨೦ ರ ವರೆಗೆ.
ತಾ|| ೬-೬-'೫೧, ಬುಧವಾರ.

ಈ ದಿನದ ರಸ್ತೆ ಅಷ್ಟು ಕಷ್ಟವಾಗೇನೂ ಕಾಣಬರಲಿಲ್ಲ. ಒಂದು ಜಾಗದಲ್ಲಿ ರಸ್ತೆ ಸ್ವಲ್ಪ ದೂರ ಪೂರ್ಣವಾಗಿ ಕುಸಿದುಬಿದ್ದುಹೋಗಿದ್ದುದರಿಂದ ಅಡ್ಡ ರಸ್ತೆಯ ಮೂಲಕ ಮುಖ್ಯ ರಸ್ತೆಗೆ ಬರಬೇಕಾಯಿತು. ಈ ಅಡ್ಡ ರಸ್ತೆಯಲ್ಲಿ ಒಂದು ಹೈಸ್ಕೂಲು ಸಿಕ್ಕಿತು. ನಾರಾಯಣಸ್ವಾಮಿ ಎಂಬ ಹೆಸರಿನ ಒಬ್ಬ ಸಾಧು ಇದನ್ನು ನಡೆಸಿಕೊಂಡು ಬರುತ್ತಿದಾರಂತೆ. ಈ ಸ್ಕೂಲಿನ ಹತ್ತಿರದಿಂದ ಹಿಮಾಲಯದ ದೃಶ್ಯ ಚೆನ್ನಾಗಿ ಕಾಣುತ್ತದೆ.

ಆಸ್ಕೋಟು ಎಂಬುದು ಒಂದು ಪುಟ್ಟ ಪಟ್ಟಣ. ತಣಕಪುರದಿಂದ ಬರುವ ಮಾರ್ಗವೂ ಇಲ್ಲಿಗೆ ಬಂದು ಸೇರುತ್ತದೆ. ಈಗಾಗಲೆ ಸರ್ಕಾರದವರು ತಣಕಪುರದಿಂದ "ಪಿಠೋರಘರ್" ಎಂಬ ಹೆಸರಿನ ಒಂದು ತಾಲೂಕು ಪಟ್ಟಣದವರೆಗೆ ೬೯ ಮೈಲಿ ದೂರ ಮೋಟಾರು ರಸ್ತ ಮಾಡಿದಾರೆ. ಪಿಠೋರಘರ್‌ನಿಂದ ಆಸ್ಕೋಟಿಗೆ ೨೫ ಮೈಲಿ. ಇದಿಷ್ಟು ದೂರವೂ ಕ್ರಮೇಣ ಮೋಟಾರು ರಸ್ತೆ ಆಗುತ್ತದೆಯಂತೆ. ತಣಕಪುರದವರೆಗೆ ಟ್ರೈನು ಇದೆ. ಮುಂದಿನ ಕೈಲಾಸ-ಮಾನಸಸರೋವರ ಯಾತ್ರಿಕರು ತಣಕಪುರದಿಂದ ಆಸ್ಕೋಟಿನವರೆಗೆ ಸುಖವಾಗಿ ಬಸ್ಸಿನಲ್ಲಿ ಬಂದುಬಿಡಬಹುದು. ಅವರಿಗೆ ಆಲ್ಮೋರದಿಂದ ಆಸ್ಕೋಟಿಗಿರುವ ೬೯ ಮೈಲಿ ದೂರವನ್ನು ನಡೆಯುವ ಕಷ್ಟ ತಪ್ಪುತ್ತದೆ.

ಇಲ್ಲಿನ ವಿಶ್ರಾಂತಿಗೃಹವೂ ಬಹಳ ಒಳ್ಳೆ ಜಾಗದಲ್ಲಿದೆ. ಸುತ್ತಲೂ ಸುಂದರವಾದ ದೃಶ್ಯ ಕಾಣಬರುತ್ತದೆ. ದೂರದಲ್ಲಿ ಕಾಳೀನದಿ ಹರಿದು ಹೋಗುತ್ತಿರುವುದನ್ನು ನೋಡಬಹುದು. ಈ ಪಟ್ಟಣದಲ್ಲಿ ಒಬ್ಬ ರಾಜನಿದಾನೆ. ಆತನಿಗೆ ಒಂದು ದೊಡ್ಡ ಬಂಗಲೆ ಇದೆ.

## ಆಸ್ಕೋಟನಿಂದ ಕುಚಿಯುಕ್ಕೆ.

೫,೦೦೦ ಅಡಿ ಎತ್ತರದಿಂದ ೩,೦೦೦ ಅಡಿ ಎತ್ತರಕ್ಕೆ. ದೂರ ೧೨ ೧/೨ ಮೈಲಿ.
ಪ್ರಯಾಣ ಬೆಳಗಿನ ೫-೧೫ ರಿಂದ ಅಪರಾಹ್ಣ ೨-೧೦ ರ ವರೆಗೆ.
ತಾ|| ೭-೬-'೫೧, ಗುರುವಾರ.

ಆಸ್ಕೋಟನ್ನು ಬಿಟ್ಟನಂತರ ಗೌರೀಗಂಗೆಯ ಸೇತುವೆ ಮುಟ್ಟುವ ವರೆಗೆ–ಸುಮಾರು ಮೂರು ಮೈಲಿ–ಬಹಳ ಕಡಿದಾದ ಇಳಿಜಾರು. ಇದಿಷ್ಟು ದೂರವನ್ನು ಇಳಿಯುವುದರೊಳಗೇ ಮಂಡಿ, ಮೊಣಕಾಲು ಸುಮ್ಮನೆ ನೋಯಲಾರಂಭಿಸಿದುವು. ಸಾಲದುದಕ್ಕೆ ಕಣ್ಣು ಕುಕ್ಕುವ ಎದುರು ಬಿಸಿಲಿನಲ್ಲೇ ನಡೆಯಬೇಕಾಯಿತು. ಅಂತೂ ಸೇತುವೆ ಮುಟ್ಟುವುದ ರೊಳಗೇ ಸಾಕಾಗಿಬಿಟ್ಟಿತು. ಸೇತುವೆ ಹತ್ತಿರ ಸುಮಾರು ಒಂದು ಘಂಟೆ ಯಷ್ಟು ಹೊತ್ತೇ ವಿಶ್ರಮಿಸಿಕೊಂಡೆವು. ನಮ್ಮ ಗುಂಪಿನವರು ಹತ್ತಿರವೇ ಇದ್ದ ಟೀ ಅಂಗಡಿಯನ್ನು ಮುತ್ತಿ ತಮ್ಮ ದಾಹ ಮತ್ತು ಶ್ರಮ ಪರಿಹಾರ ಮಾಡಿಕೊಂಡರು. ನಾನು ಟೀ ಕಾಫಿಗಳ ಅಭ್ಯಾಸ ಇಟ್ಟುಕೊಂಡಿಲ್ಲ ದಿದ್ದುದರಿಂದ ಬರೀ ಬಿಸಿನೀರಿನಿಂದಲೇ ತೃಪ್ತನಾಗಬೇಕಾಯಿತು.

ಹಾಗೇ ಅನಿಸಿತು: "ನಮ್ಮ ಮನಸ್ಸು ಎಷ್ಟು ವಿಚಿತ್ರವಾದ್ದು! ತಿಟ್ಟು ಹತ್ತುವಾಗ ಹೇಳುತ್ತೆ: 'ಇಳಿಜಾರನ್ನು ಇಳಿಯುವುದು ಎಷ್ಟು ಸುಲಭ–ಎಷ್ಟು ಲೀಲಾಜಾಲವಾಗಿ "ಗುಡು, ಗುಡು" ಅಂತ ಇಳಿದು ಹೋಗಿಬಿಡಬಹುದು!' ಇಳಿಜಾರು ಸಿಕ್ಕಿದಾಗ ಹೇಳುತ್ತೆ: 'ತಿಟ್ಟೇ ಎಷ್ಟೋ ವಾಸಿ. ಮಂಡಿ ಮೊಣಕಾಲು ಅಷ್ಟಾಗಿ ನೋಯೋದಿಲ್ಲ. ಮೆತ್ತ ಮೆತ್ತಗೆ ಹತ್ತಿಬಿಡಬಹುದು!' ಈ ನಮ್ಮ ಮನಸ್ಸು ಎಂಥ ಮೋಸಕಾರಿ. ಇದು ಸಿಕ್ಕಿದರೆ ಸುಖವಾಗಿರುತ್ತೇವೆ, ಅದು ಸಿಕ್ಕಿದರೆ ಸುಖವಾಗಿರುತ್ತೇವೆ ಎಂಬು ದಾಗಿ ನಮ್ಮನ್ನು ಇಲ್ಲಿಂದ ಅಲ್ಲಿಗೆ, ಅಲ್ಲಿಂದ ಇಲ್ಲಿಗೆ ಅಲೆಯಿಸಿ ಅಲೆಯಿಸಿ ಸುಮ್ಮನೆ ಸಾಯಿಸುತ್ತದೆಯಲ್ಲ! ಇಡೀ ಜೀವನದಲ್ಲೆಲ್ಲಾ ನಮ್ಮನ್ನು ಹೀಗೇ ಮೋಸಪಡಿಸುತ್ತಿದೆಯಲ್ಲ! ನಮಗೆ ಮಂಕುಬೂದಿ ಎರಚಿ ತನ್ನ ಮನೋರಥವನ್ನು ಈಡೇರಿಸಿಕೊಳ್ಳುತ್ತಿದೆಯಲ್ಲ! ತನ್ನ ಮೋಹಕ ಶಕ್ತಿ ಯಿಂದ ನಮ್ಮನ್ನು ತನ್ನ ದಾಸರನ್ನಾಗಿ ಮಾಡಿಕೊಳ್ಳುತ್ತದೆಯಲ್ಲ! ಮನಸ್ಸು ನಮ್ಮ ದಾಸನಾಗದಿದ್ದರೆ ನಾವು ಮಾನವನ ಗುರಿಯನ್ನು–ಭಗ ವಂತನ ಸಾಕ್ಷಾತ್ಕಾರವನ್ನು–ಪಡೆಯಲು ಸಾಧ್ಯವೇ? ಆದ್ದರಿಂದ ಮನುಷ್ಯ ಎಷ್ಟು ಎಚ್ಚರಿಕೆಯಿಂದ ಈ ಮನಸ್ಸಿನೊಡನೆ ವ್ಯವಹರಿಸಬೇಕು! ಇಂಥ ಮನಸ್ಸನ್ನು ತನ್ನ ಹತೋಟಿಯಲ್ಲಿ ಇಟ್ಟುಕೊಳ್ಳಬೇಕಾದರೆ ಆತ ಎಷ್ಟು ಚತುರನಾಗಿ ಆಗಬೇಕು; ಎಂಥಾ ದೂರದೃಷ್ಟಿ ಹೊಂದಿದವನಾಗಿ ಆಗಬೇಕು ಏನುಕತೆ! ಬಡಪಟ್ಟಿಗೆ ಇದು ಬಗ್ಗುವುದೆ? ಇಲ್ಲ, ಇಲ್ಲ.

ಎಂದಿಗೂ ಇಲ್ಲ. ಅದರ ಪಾದದಡಿ ಅಂಗಲಾಚಿ ಬಿದ್ದು ಬೇಡಿಕೊಂಡರೂ ತನ್ನ ಮೋಸ ಪ್ರವೃತ್ತಿಯನ್ನು ಅದು ಬಿಡುವುದೆ? ಎಂದೆಂದಿಗೂ ಇಲ್ಲ. ವಿವೇಕವೈರಾಗ್ಯವೆಂಬ ಅಂಕುಶವನ್ನು ಹಿಡಿದು ಅದನ್ನು ಚೆನ್ನಾಗಿ ತಿವಿದು ಬಡಿದುಹಾಕಿದರೆ ಮಾತ್ರ ಅದು ನಾವು ಹೇಳಿದ ಹಾಗೆ ಕೇಳುತ್ತದೆ–ಏಳು ಅಂದರೆ ಏಳುತ್ತದೆ, ಬೀಳು ಅಂದರೆ ಬೀಳುತ್ತದೆ. ಈ ಜನ್ಮದಲ್ಲೇ ಮುಕ್ತಿಯನ್ನೂ ದೊರಕಿಸಿಕೊಡುತ್ತದೆ. ನಮಗೂ ಆನಂದವನ್ನು ದೊರಕಿಸಿಕೊಡುತ್ತದೆ, ಇತರರಿಗೂ ಮೇಲ್ಮೆಯನ್ನು ತಂದುಕೊಡುತ್ತದೆ. ಪ್ರತಿಯೊಬ್ಬನನ್ನೂ ಭೂಲೋಕದಲ್ಲಿ ನಡೆಯುತ್ತಿರುವ ಒಬ್ಬೊಬ್ಬ ಭಗವಂತನನ್ನಾಗಿ ಮಾಡಿಬಿಡುತ್ತದೆ."

ಗೌರೀಗಂಗೆಯ ಮೇಲೆ ಹಾಕಿರುವ ತೂಗು ಸೇತುವೆ ಬಹಳ ದೊಡ್ಡದು. ಇದನ್ನು ದಾಟಿದನಂತರ ಗೌರೀಗಂಗೆ ಕಾಳೀನದಿಯನ್ನು ಸೇರುವವರೆಗೆ ಅದರ ಎಡ ದಡದಲ್ಲೇ ಮುಂದುವರಿಯಬೇಕು. ಈ ನದಿಯ ಇಕ್ಕೆಲದ ಬೆಟ್ಟಗಳು ಮರಳು ಮಿಶ್ರಿತ ನದಿಯ ಹಾಸಿಗೆಯ ಕಲ್ಲುಗುಂಡುಗಳ ರಾಶಿಯೋ ರಾಶಿಯಾಗಿ ಕಂಡುಬಂದುವು. ಆಗ ನನಗನಿಸಿತು: "ಬಹುಶಃ ಈ ಪ್ರದೇಶ ಒಮ್ಮೆ ಸಮುದ್ರದ ತಳದಲ್ಲಿ ಇದ್ದಿರಬೇಕು." ದಾರಿಯ ಉದ್ದಕ್ಕೂ ಈ ಬೆಟ್ಟಗಳಿಂದ ಕಲ್ಲುಬಂಡೆಗಳು ಉರುಳಿ ಉರುಳಿ ದಾರಿಯ ಮೇಲೆ ಬಿದ್ದಿದ್ದುವು, ಬೀಳಲೂ ಸತತ ಸಿದ್ಧವಾಗೇ ಇದ್ದುವು. ಎಲ್ಲೊ ನೆಪಮಾತ್ರಕ್ಕೆ ಅವು ಬೆಟ್ಟಕ್ಕೆ ಅಂಟಿಕೊಂಡಿದ್ದುವು. ಆದರೆ ಭಗವಂತನ ಕೃಪೆಯಿಂದ ಮರಗಿಡಗಳು ಈ ಬೆಟ್ಟಗಳ ಮೇಲೆ ಬಹಳ ಸೊಂಪಾಗಿ ಬೆಳೆದಿದ್ದುದರಿಂದ ಅವು ತಮ್ಮ ಬೇರುಗಳಿಂದ ಈ ಗುಂಡುಗಳ ಬಹುಭಾಗವನ್ನು ಬೆಟ್ಟಕ್ಕೆ ಬಂಧಿಸಿ ಇಟ್ಟಿದ್ದುವು. ಆದರೂ ಬಹಳ ಎಚ್ಚರಿಕೆಯಿಂದ ನಡೆಯಬೇಕಾಗಿತ್ತು. ಇಲ್ಲದಿದ್ದರೆ ಮರಣದ ಕತ್ತಿ ಕತ್ತಿನ ಹತ್ತಿರ ನೇತಾಡುತ್ತಲೇ ಇತ್ತು.

ಕಾಳಿ ಮತ್ತು ಗೌರಿ ನದಿಗಳ ಸಂಗಮದ ಹತ್ತಿರಕ್ಕೆ ಬಂದಾಗ ನಮಗೆ ಹಗ್ಗದ ಸೇತುವೆಯ ಪ್ರಪ್ರಥಮ ದರ್ಶನವಾಯಿತು. ನದಿಯ ದಡದಲ್ಲಿನ ಒಂದು ಬಲವಾದ ಮರಕ್ಕೇ ಆಗಲಿ ಅಥವಾ ನೆಟ್ಟ ಒಂದು ಮರದ ದಿಮ್ಮಿಗೇ ಆಗಲಿ ನಾಲ್ಕು ಹಗ್ಗಗಳನ್ನು ಕಟ್ಟಿ, ನದಿಯ ಆಚೆ ದಡಕ್ಕೆ ಆ ಹಗ್ಗಗಳನ್ನು ಎಳೆದು ಅಲ್ಲಿಯೂ ಯಾವುದಾದರೂ ಒಂದು

ಆಸರೆಗೆ ಅವನ್ನು ಕಟ್ಟುತ್ತಾರೆ ನದಿ ದಾಟಬೇಕಾದವನ ಹತ್ತಿರ ಒಂದು ತುದಿಗೆ ಹಗ್ಗ ಕಟ್ಟಿದ ಮರದ ಕಮಾನು ಇರುತ್ತದೆ. ಅದನ್ನು ಆ ಹಗ್ಗಗಳ ಮೇಲಿಟ್ಟು, ಆತ ಆ ಹಗ್ಗಗಳ ಕೆಳಗೆ ಬಾಗಿಸಿಂತು, ಆ ಕಮಾನಿಗೆ ಕಟ್ಟಿರುವ ಹಗ್ಗವನ್ನು ತನ್ನ ಕಂಕುಳು ಬೆನ್ನು ಇವುಗಳ ಮೂಲಕ ಎಳೆದು ಕೊಂಡು ಅದನ್ನು ಆ ಕಮಾನಿನ ಇನ್ನೊಂದು ಕೊನೆಗೆ ಕಟ್ಟುತ್ತಾನೆ. ಬಳಿಕ ಅಂಗತ್ತನಾಗಿ ಜೋಲುಬಿದ್ದು ಕೈಕಾಲುಗಳ ಸಹಾಯದಿಂದ ಮುಂದು ಮುಂದಕ್ಕೆ ಸರಿದಾಗ ಆ ಮರದ ಕಮಾನೂ ಆ ನಾಲ್ಕು ಹಗ್ಗಗಳ ಮೇಲೆ ಜಾರುತ್ತಾ ಜಾರುತ್ತಾ ಮುಂದಕ್ಕೆ ಸರಿಯುತ್ತದೆ. ಹಾಗೆ ಸರಿಯುತ್ತಾ ಸರಿಯುತ್ತಾ ಹೋಗಿ ಆತ ಆಚೆ ದಡವನ್ನು ತಲುಪಿಬಿಡುತ್ತಾನೆ. ಸಾಕಾ ದಾಗಲೆಲ್ಲಾ ಆ ಹಗ್ಗಗಳ ಮೇಲೆ ಹತ್ತಿ ಮಲಗಿ ವಿಶ್ರಮಿಸಿಕೊಳ್ಳುತ್ತಾನೆ. ಇದೊಂದು ವಿಧವಾದ ದೊಡ್ಡ ಸರ್ಕಸ್ಸೇ! ಜನರು ಈ ರೀತಿಯಾಗಿ ತಾವೇ ನದಿಯನ್ನು ದಾಟಿಹೋಗುವುದೂ ಅಲ್ಲದೆ ತಮ್ಮ ಬೆನ್ನಿಗೆ ಸಾಮಾನುಗಳ ಚೀಲ, ಮೂಟೆ ಇವನ್ನೂ ಕಟ್ಟಿಕೊಂಡು ಆಚೆ ದಡವನ್ನು ತಲುಪಿಬಿಡು ತ್ತಾರೆ. ಸ್ವಲ್ಪ ಐಶ್ವರ್ಯವಂತರಾದವರು ದಾಟಬೇಕಾದರೆ ನಾನು ವಿವರಿಸಿದ ರೀತಿಯ ಮರದ ಕಮಾನಿಗೆ ಒಂದು ಹಗ್ಗದ ಅಡ್ಡೆಯನ್ನು ಕಟ್ಟುತ್ತಾರೆ. ಮನುಷ್ಯ ಅದರಲ್ಲಿ ಕುಳಿತುಕೊಳ್ಳುತ್ತಾನೆ. ಆ ಅಡ್ಡೆಗೆ ಎರಡು ದಡಗಳಿಂದಲೂ ಹಗ್ಗ ಕಟ್ಟಿ ಅದನ್ನು ಯಾವ ದಡಕ್ಕೆ ಅಂದರೆ ಆ ದಡಕ್ಕೆ ಎಳೆಯುತ್ತಾರೆ. ಇದನ್ನು ಕಣ್ಣಿನಿಂದ ನೋಡಬೇಕಾದ್ದೆ. ಚಿಕ್ಕ ಚಿಕ್ಕ ಹುಡುಗರೂ ಧೈರ್ಯವಾಗಿ ನಾನು ಮೊದಲು ವಿವರಿಸಿದ ರೀತಿ ಯಲ್ಲಿ ನದಿಯನ್ನು ದಾಟಬಿಡುತ್ತಾರೆ. ಎಲ್ಲಾ ಅಭ್ಯಾಸ.

ಕಾಳೀನದಿಯ ವೇಗ ಬಲು ಭಯಂಕರವಾದ್ದು. ಅದು ಕಲ್ಲು ಗುಂಡುಗಳ ಮೇಲೆ ಬಿದ್ದು ಭೋರ್ಗರೆಯುತ್ತಾ ನೊರೆನೊರೆಯಾಗಿ ಪ್ರವಹಿಸುತ್ತದೆ. ಇಂದಿನ ಬಹು ಭಾಗದ ದಾರಿ ಅದರ ಬಲ ಓಡೆಯಲ್ಲೆ ಮುಂದುವರಿದು ನಮ್ಮನ್ನು ಕುಚಿಯಕ್ಕೆ ತಲುಪಿಸಿತು.

ಕುಚಿಯದ ಪ್ರವಾಸಿ-ಮಂದಿರ ಕಾಳೀನದಿಯ ಬಲ ದಡದಲ್ಲಿ ಇದೆ. ಈ ಪ್ರದೇಶ ಬಹಳ ರಮ್ಯವಾದ ಸ್ಥಳ. ಬಹಳ ಹತ್ತಿರದಲ್ಲೆ ಸುತ್ತಲೂ ಎತ್ತರವಾದ ಬೆಟ್ಟಗಳ ಸಾಲು ಇವೆ. ಬೆಲ್ಲದಚ್ಚಿನೊಳಕ್ಕೆ ನಮ್ಮನ್ನು ಹಾಕಿ ಟ್ಟಂತೆ ಅನುಭವವಾಯಿತು. ಇಂದಿನ ರಾತ್ರಿ ಇಲ್ಲಿ ಬಹಳ ಸ್ಪಷ್ಟವಾದ

ಚಂದ್ರೋದಯವಾಯಿತು. ಆಗ ಈ ಪ್ರದೇಶ ಇನ್ನೂ ಮನೋಹರವಾಗಿ ಕಾಣಲಾರಂಭಿಸಿತು. ಇಲ್ಲಿ ಹಾವು ಬಹಳವಾಗಿ ಇವೆ. ಆದರೆ ಎಚ್ಚರಿಕೆಯಿಂದ ಇದ್ದರೆ ಹೆದರಬೇಕಾದ್ದೇನಿಲ್ಲ.

## ಕಾಂಚಿಯದಿಂದ ಧಾರ್ಚುಲಕ್ಕೆ.

೩೦೦೦ ಅಡಿ ಎತ್ತರದಿಂದ ಅದೇ ಎತ್ತರಕ್ಕೆ. ದೂರ ೧೨ ೧/೨ ಮೈಲಿ.

ಪ್ರಯಾಣ ಮುಂಜಾನೆ ೫ ರಿಂದ ಬೆಳಗಿನ ೧೦-೩೦ ರ ವರೆಗೆ.

ತಾ|| ೮-೬-'೫೧, ಶುಕ್ರವಾರ.

ಇಂದಿನ ದಾರಿ ಅಷ್ಟು ಪ್ರಯಾಸವಾದುದೇನಲ್ಲ. ಚಿಕ್ಕಪುಟ್ಟ ಹಳ್ಳ ತಿಟ್ಟುಗಳನ್ನು ಇಳಿದೂ ಹತ್ತಿ ನಿರಾಯಾಸವಾಗಿ ಧಾರ್ಚುಲವನ್ನು ತಲುಪಿ ಬಿಟ್ಟೆವು.

ಧಾರ್ಚುಲ ಬಹಳ ಸುಂದರವಾದ ಜಾಗ. ಅಕ್ಕಪಕ್ಕದಲ್ಲಿ ವಿಶಾಲ ವಾದ ಬತ್ತದ ಬಯಲುಗಳಿವೆ. ಇಲ್ಲಿ ಅನೇಕ ಮನೆಗಳು, ಅಂಗಡಿ ಮುಂಗಟ್ಟುಗಳು ಇವೆ. ಇದು ಒಂದು ವ್ಯಾಪಾರ ಸ್ಥಳ. ಇಲ್ಲಿ ಭುಟಿಯಾ ದವರ ಮನೆಗಳ ಸಾಲು ಸಾಲೇ ಇವೆ. ಅವರು ಚಳಿಗಾಲದಲ್ಲಿ ಇಲ್ಲಿ ಇದ್ದು ಬೇಸಿಗೆಯಲ್ಲಿ ಇನ್ನೂ ಎತ್ತರ ಪ್ರದೇಶಗಳಿಗೆ ಹೋಗಿ ವ್ಯಾಪಾರಮಾಡುತ್ತಾ ರಂತೆ. ಇಲ್ಲಿ ಪೋಸ್ಟಾಫೀಸ್, ಮಾಧ್ಯಮಿಕ ಶಾಲೆ ಇವೆ. ಇಲ್ಲಿ ಒಬ್ಬ ಕ್ರಿಶ್ಚಿಯನ್ ಪಾದ್ರಿ ಬಹಳ ಸುಂದರವಾದ ಜಾಗದಲ್ಲಿ ತನ್ನ ಬಂಗಲೆಯನ್ನು ಕಟ್ಟಿಕೊಂಡಿದಾನೆ. ಆತನ ಬಂಗಲೆಯ ಹತ್ತಿರವೇ ಒಂದು ದೊಡ್ಡ ಝರಿ ಹರಿಯುತ್ತಿದೆ. ಅದರ ನೀರನ್ನು ಉಪಯೋಗಿಸಿಕೊಂಡು ಬಾಳೆ ಗೀಳೆ ತೋಟ ಮಾಡಿಕೊಂಡಿದಾನೆ.

ಇಲ್ಲಿನ ಪ್ರವಾಸಿ ಮಂದಿರ ಅಷ್ಟು ಚೆನ್ನಾಗಿಲ್ಲ. ಇದರ ಎದುರಿಗೇ ಒಂದು ದೊಡ್ಡ ಅರಳಿ ಮರ ಇದೆ. ಅದಕ್ಕೆ ಸುತ್ತಲೂ ಕಟ್ಟೆ ಕಟ್ಟಿದಾರೆ. ಈ ಪ್ರವಾಸಿ ಮಂದಿರದ ಬದಿಯಲ್ಲೆ ಕಾಳೀನದಿ ಹರಿಯುತ್ತಿದೆ. ಇದರ ಬಲ ಭಾಗವೆ ಭಾರತ, ಎಡ ಭಾಗವೆ ನೇಪಾಳ. ಇಲ್ಲಿ ಭಾರತದಿಂದ ನೇಪಾಳಕ್ಕೆ ಹೋಗಲು ಒಂದು ಹಗ್ಗದ ಸೇತುವೆ ಇದೆ. ಈ ನದಿಯ ಎಡ ಭಾಗದಲ್ಲಿ ಧಾರ್ಚುಲದ ಎದುರಿಗೇನೇ ನೇಪಾಳದ ಒಂದು ಹಳ್ಳಿ ಇದೆ. ಈ ನದಿಯ ಎಡ ದಡಕ್ಕೆ ನೇಪಾಳಿಗಳು, ಬಲ ದಡಕ್ಕೆ ಭಾರತೀಯರು

ಸ್ನಾನಮಡಿಗಳಿಗಾಗಿ ಬರುತ್ತಾರೆ. ಇಲ್ಲಿ ನದಿಯ ವೇಗ ಬಹಳ ಭಯಂಕರ ವಾದ್ದು ನಾವು ಇಲ್ಲಿಗೆ ಬಂದ ಮಾರನೆ ದಿನ ಹದಿನಾಲ್ಕು ಹದಿನೈದು ವಯಸ್ಸಿನ ಒಬ್ಬ ನೇಪಾಳಿ ಯುವತಿ ನೀರು ತೆಗೆದುಕೊಂಡು ಹೋಗಲು ನದಿಗೆ ಬಂದಳು. ಕೊಡಕ್ಕೆ ನೀರು ತುಂಬುತ್ತಿರುವಾಗ ಕಾಲು ಎಲ್ಲೊ ಕಿಂಚಿತ್ ಜಾರಿರಬೇಕು, ಒಡನೆಯೇ ನದಿ ಆಕೆಯನ್ನು ಒಳಕ್ಕೆ ಎಳೆದು ಕೊಂಡು ಸ್ವಾಹಾಮಾಡಿಕೊಂಡುಬಿಟ್ಟಿತು. ಎಷ್ಟು ಹುಡುಕಿದರೂ ಆಕೆಯ ಸುಳಿವೇ ದೊರೆಯದೆಹೋಯಿತು. ಇಲ್ಲಿಯೂ ವಿಪರೀತ ಹಾವುಗಳು. ಇಲ್ಲಿ ನಾವು ಇದ್ದುದು ಮೂರೇ ದಿನ. ಪ್ರವಾಸಿ ಮಂದಿರದ ಹತ್ತಿರದಲ್ಲಿ ಅಷ್ಟರೊಳಗೇ ಮೂರು ಹಾವುಗಳನ್ನು ಕೊಲ್ಲಬೇಕಾಯಿತು. ಅವು ಭಾರಿ ಭಾರಿ ಹಾವುಗಳೇ. ಆದರೆ ಯಾವ ಜಾತಿಯವೊ ಗೊತ್ತಾ ಗಲಿಲ್ಲ.

ಇಲ್ಲಿಗೆ ನಮ್ಮ ಕೈಲಾಸ-ಮಾನಸಸರೋವರ ಯಾತ್ರೆಯ ಮೊದಲ ನೆಯ ಘಟ್ಟ ಮುಗಿದಂತಾಯಿತು. ಆಲ್ಮೋರದಿಂದ ಬಂದಿದ್ದ ಕುದುರೆ-ಗಿದುರೆ ಆಳು-ಕಾಳು ಎಲ್ಲರೂ ಹಿಂದಿರುಗಿ ಹೊರಟುಹೋದರು. ಈಗ ನಾವು ಗರ್ಭಿಯಾಂಗಿಗೆ ಹೋಗಲು ತಕ್ಕ ಸಿದ್ಧತೆ ಮಾಡಿಕೊಳ್ಳಲು ಆರಂಭಿಸಿದೆವು. ಇಲ್ಲಿ ಮೋಹನಸಿಂಗ್ ಎಂಬ ಒಬ್ಬ ವರ್ತಕ ಇದ್ದಾನೆ. ಆತ ಬಹಳ ಒಳ್ಳೆಯವ. ಆತನಿಗೆ ಅಂಗಡಿಗಳು ಆಲ್ಮೋರದಲ್ಲಿ, ಇಲ್ಲಿ, ಗರ್ಭಿಯಾಂಗಿನಲ್ಲಿ, ತಾಕ್ಲಕೋಟೆಯಲ್ಲಿ ಇವೆ. ಆತ ಒಬ್ಬ ಗಣ್ಯವ್ಯಕ್ತಿ. ಜನ ಆತನ ಮಾತಿಗೆ ಬೆಲೆ ಕೊಡುತ್ತಾರೆ. ಆತ ಮತ್ತು ಖೇಲದಲ್ಲಿರುವ ಪ್ರತಾಪಸಿಂಗ್ ಇಬ್ಬರೂ ಸ್ನೇಹಿತರು. ಪ್ರತಾಪಸಿಂಗನ ಮೂಲಕ ನಮ್ಮ ಗರ್ಭಿಯಾಂಗಿನ ಪ್ರಯಾಣಕ್ಕೆ ಬಹಳವಾಗಿ ಸಹಾಯ ಮಾಡಿದುದೂ ಅಲ್ಲದೆ, ನಾವು ಮತ್ತೆ ಹಿಂದಿರುಗಿ ಧಾರ್ಚುಲಕ್ಕೆ ಬರುವವರೆಗೆ ನಮಗೆ ಬೇಕಾಗುವ ಸಕಲ ಅನುಕೂಲತೆಗಳನ್ನೂ ಆತ ಕಲ್ಪಿಸಿಕೊಟ್ಟ. ಆತನಿಗೆ ಆಲ್ಮೋರದ ಒಂದು ಬ್ಯಾಂಕಿನಲ್ಲಿ ಲೆಕ್ಕ ಇದ್ದುದರಿಂದ ನಾವು ನಮಗೆ ಬೇಕಾದಷ್ಟು ಹಣವನ್ನು ಆತನಿಂದ ತೆಗೆದುಕೊಂಡು ಚೆಕ್ಕನ್ನು ಆತನಿಗೆ ಕೊಟ್ಟುಬಿಡುತ್ತಿದ್ದೆವು. ಇದು ಒಂದು ದೊಡ್ಡ ಉಪಕಾರವನ್ನೇ ಮಾಡಿದಂತಾಯಿತು. ಇಲ್ಲದಿದ್ದರೆ ನಮ್ಮ ಹತ್ತಿರವೇ ಹಣವನ್ನೆಲ್ಲಾ ಇಟ್ಟು

ಕೊಂಡು ಭಗವಂತನ ಧ್ಯಾನಕ್ಕೆ ಬದಲು ಕಳ್ಳಕಾಕರ ಧ್ಯಾನ ಮಾಡಬೇಕಾಗಿ ಬರುತ್ತಿತ್ತು. ಕೈಲಾಸಗಿರಿಯಿಂದ ಹಿಂದಿರುಗಿ ತಾಕ್ಲಕೋಟೆಗೆ ಬಂದಾಗ ನಾವು ಅಲ್ಲಿ ಆತನ ಅಂಗಡಿಯಲ್ಲೇ ಒಂದು ದಿನವನ್ನು ಕಳೆದೆವು. ಆತ ಬಹಳ ಒಳ್ಳೆಯವ. ನಮ್ಮ ಬಂಧುಬಾಂಧವನಂತೇ ವ್ಯವಹರಿಸಿದ.



೩

# ಧಾರ್ಚುಲದಿಂದ ಗರ್ಭಿಯಾಂಗಿಗೆ

## ಪ್ರಯಾಣ ತಾ|| ೧೨-೬-೧೯೫೧ ರಿಂದ ೧೬-೬-೧೯೫೧ ರ ವರೆಗೆ

## ದೂರ ೫೭ ಮೈಲಿ.



ಈ ಭಾಗದ ದಾರಿಯನ್ನು ಕಾಲುನಡಿಗೆಯಲ್ಲಿ ನಡೆಯುವುದೇ ಮೇಲು ಮತ್ತು ಕ್ಷೇಮಕರ. ಕೆಲವೆಡೆಗಳಲ್ಲಿ ಒಲ್ಲೆನೆಂದರೂ ನಡೆದೇ ತೀರಬೇಕು, ಏಕೆಂದರೆ ರಸ್ತೆ ಅತ್ಯಂತ ಕಿರಿದು — ಬೇರೆ ಮಾರ್ಗವೇ ಇಲ್ಲ. ಜನ ಎದುರುಬದುರಾಗಿ ಬಂದಾಗ ಹೇಗೊ ಪ್ರಯಾಸಪಟ್ಟು ಒಬ್ಬರನ್ನೊಬ್ಬರು ದಾಟಬಲ್ಲರು. ಈ ಕಡೆ ಸಾಮಾನುಸರಕುಗಳನ್ನು ಆಡುಕುರಿಗಳ ಮೇಲೆ ಹೇರಿ ಸಾಗಿಸುತ್ತಾರೆ. ಅವುಗಳ ಹಿಂಡೂ ಆಗಾಗ ಬರುತ್ತಲೇ ಇರುತ್ತವೆ. ಇಲ್ಲಿ ಮಳೆ ಬಂದರಂತೂ ಈ ದಾರಿಯ ಅವಸ್ಥೆ ದುರವಸ್ಥೆಯೇ. ಆಡುಕುರಿಗಳ ಹಿಕ್ಕೆ ನೆನೆದು ಕಾಲಿಟ್ಟೊಡನೇ ಜಾರ ಲಾರಂಭಿಸುತ್ತದೆ. ದಾರಿಯ ಎಡ ಭಾಗದಲ್ಲಿ ಸಹಸ್ರಾರು ಅಡಿ ಎತ್ತರದ ಬೆಟ್ಟಗಳು ನೇರವಾಗಿ ಗೋಡೆಯಂತೆ ಎದ್ದಿವೆ. ಬಲ ಭಾಗದಲ್ಲಿ ಒಮ್ಮೊಮ್ಮೆ ಕಾಳೀನದಿ ಒಂದೆರಡು ಸಾವಿರ ಅಡಿ ಆಳದಲ್ಲಿ ಹರಿಯುತ್ತದೆ. ಅದೇನು ಮೆಲ್ಲಗೆ ಸುಮ್ಮನೆ ಹರಿಯುತ್ತದೆಯೆ ? ಇಲ್ಲ. ಕಲ್ಲು ಗುಂಡುಗಳ ಮೇಲೆ ಬಿದ್ದು ಅವನ್ನೂ ಉರುಳಿಸಿಕೊಂಡು ಒಬ್ಬರ ಮಾತು ಇನ್ನೊಬ್ಬರ ಕಿವಿಗೆ ಬೀಳದ ರೀತಿಯಲ್ಲಿ ಭೋರ್ಗರೆಯುತ್ತ ಹರಿಯುತ್ತದೆ. ಆ ಕಡೆಗೆ ದೃಷ್ಟಿ ಹಾಕಿದರೇ ಸಾಕು ತಲೆ ಗಿರ್ರೆಂದು ತಿರುಗಲಾರಂಭಿಸುತ್ತದೆ. ಹೋಗಲಿ, ಮೇಲಕ್ಕೆ ನೋಡೋಣ ಎಂದರೆ ದಾರಿಯ ಒತ್ತಿನಲ್ಲೇ ಗೋಡೆ ಯಂತೆ ಎದ್ದಿರುವ ಬೆಟ್ಟಗಳಲ್ಲಿ ಬಂಡೆ ಆ ರೀತಿಯಾಗಿ ನಿಂತಿವೆ. ಯಾವ ನಿಮಿಷದಲ್ಲಿ ಅವು ಕಳಚಿ ತಲೆ ಮೇಲೆ ಬೀಳುವುವೊ ಹೇಳಲಾಗದು. ನಾವು ಜಿಪ್ತಿಯಿಂದ ಮಾಲ್ಪಕ್ಕೆ ಹೋದಾಗ ಮೇಲಿಂದ ಕಲ್ಲು ಕಳಚಿ ರಸ್ತೆಗೆ ಬಿದ್ದು ಅಲ್ಲಿ ಮುಂದುವರಿಯುತ್ತಿದ್ದ ಆರು ಆಡುಗಳಿಗೆ ಒಡನೇ ಮೃತ್ಯು ಸಂಭವಿಸಿತು. ಅದರ ಹತ್ತಿರ ಬರುತ್ತಿದ್ದ ನಮ್ಮ ಕೂಲಿ ಆಳುಗಳಿಗೂ

ಆ ಕಲ್ಲಿನ ಕೆಲವು ಚೂರುಗಳು ತಗುಲಿ ಸಾಮಾನ್ಯ ಗಾಯಗಳಾದುವು. ಕೆಲವೆಡೆಗಳಲ್ಲಿ ಕುಸಿದುಬಿದ್ದುಹೋಗಿರುವ ರಸ್ತೆ ಮೇಲೆ ಮರದ ದಿಮ್ಮಿಗಳನ್ನು ಹಾಕಿ ರಸ್ತೆ ಮಾಡಿದಾರೆ. ಒಮ್ಮೊಮ್ಮೆ ಆ ದಿಮ್ಮಿ ವೃದ್ಧರ ತಲೆಯ ಹಾಗೆ ಅಳ್ಳಾಡುತ್ತಿರುತ್ತವೆ. ಅವುಗಳ ಮೇಲೆ ಕಾಲಿಡಬೇಕಾದರೆ ಪ್ರಾಣ ಕೈಗೆ ತೆಗೆದುಕೊಂಡು ಕಾಲಿಡಬೇಕು. ಇನ್ನೂ ಕೆಲವೆಡೆಗಳಲ್ಲಿ ಪಕ್ಕದ ಬೆಟ್ಟದಿಂದ ಕಲ್ಲು ರಸ್ತೆಗೆ ಚಾಚಿಕೊಂಡಿರುತ್ತದೆ. ನಾವು ಬಹಳವಾಗಿ ಬಗ್ಗಿ ಅದರ ಕೆಳಗೆ ಮುಂದುವರಿಯಬೇಕಾಗುತ್ತದೆ. ಹೋಗಲಿ, ಈ ಪ್ರದೇಶದಲ್ಲಿ ರಸ್ತೆ ಒಂದೇ ಮಟ್ಟದಲ್ಲಾದರೂ ಇದೆಯೆ? ಕೇಳಲೇ ಬೇಡಿ. ಒಮ್ಮೆ ಸ್ವರ್ಗಕ್ಕೆ ಕರೆದೊಯ್ಯುತ್ತದೆ, ಒಮ್ಮೆ ಪಾತಾಳಕ್ಕೆ ಇಳಿಸಿಬಿಡುತ್ತದೆ. ಮನುಷ್ಯ ಎಂಥ ನಾಸ್ತಿಕನೇ ಆಗಲಿ ಆತನನ್ನು ಆಸ್ತಿಕನನ್ನಾಗಿ ಮಾಡಬೇಕಾದರೆ ಈ ಮಾರ್ಗವಾಗಿ ಆತನನ್ನು ಕರೆದುಕೊಂಡುಹೋದರೇ ಸಾಕು. ಈ ಕಡೆ ನಾಸ್ತಿಕನಾಗಿದ್ದವನು ಆ ಕಡೆಗೆ ಬರುವುದರಲ್ಲಿ ತನಗೆ ತಾನೇ ಆಸ್ತಿಕನಾಗಿಬಿಡುತ್ತಾನೆ. ಉಪದೇಶ-ಗಿಪದೇಶ ಏನೂ ಬೇಕಾಗೋದಿಲ್ಲ. ಯಾತ್ರಿಕನಿಗೆ ಕೈಲಾಸಪತಿಯ ಮೇಲೆ ಯಾವ ವಿಧವಾದ ಶ್ರದ್ಧಾಭಕ್ತಿ ಇದೆ ಎಂಬುದನ್ನ ಈ ದಾರಿ ಒರೆಗಲ್ಲಿಗೆ ಹಚ್ಚಿ ನೋಡಿಬಿಡುತ್ತದೆ. ಇದರಲ್ಲಿ ತೇರ್ಗಡೆಯಾದವನಿಗೆ ಭಾರತದ ಗಡಿಯಲ್ಲಿರುವ ಲಿಪುಲೇಖ್ ಕಣಿವೆ ದಾಟುವಾಗ ಇನ್ನೊಮ್ಮೆ ಪರೀಕ್ಷೆ. ಅದರಲ್ಲೂ ತೇರ್ಗಡೆಯಾದರೇನೇ ಕೈಲಾಸಪತಿಯ ದರ್ಶನ, ಇಲ್ಲದಿದ್ದರೆ ಇಲ್ಲ. ಆತ ಸುಲಭಕ್ಕೆ ದೊರೆಯತಕ್ಕವನೆ? ಎಂದಿಗೂ ಇಲ್ಲ. ಪ್ರಾಣದ ಮೇಲಿನ ಭಯ ಬಿಡಬೇಕು. ಗೆದ್ದರೆ ಕೈಲಾಸಪತಿಯ ದರ್ಶನ, ಇಲ್ಲದಿದ್ದರೆ ಆ ಮಹಾಕಾರ್ಯದಲ್ಲಿ ಮಡಿಯುವಿಕೆ ಎನ್ನಬೇಕು. ಈ ವಿಧವಾದ ಸತ್ಯಸಂಕಲ್ಪವಿದ್ದರೇ ಈ ಉದ್ಯಮದಲ್ಲಿ ಯಶಸ್ವಿಗಳಾಗಲು ಸಾಧ್ಯ. ಇದೊಂದರಲ್ಲೇ ಏಕೆ, ಪ್ರತಿಯೊಂದರಲ್ಲೂ.

ಮೈಸೂರು ಮಹಾರಾಜರು—ಶ್ರೀಕೃಷ್ಣರಾಜೇಂದ್ರ ಒಡೆಯರವರು—೧೯೩೧ ನೆ ಇಸವಿಯಲ್ಲಿ ಕೈಲಾಸ-ಮಾನಸಸರೋವರ ಯಾತ್ರೆ ಮಾಡಿದರು. ಅವರು ಯಾತ್ರೆಗೆ ಬರುವ ಮುನ್ನ ಈ ದಾರಿಯ ಒಂದು ಭಾಗ—ಜಿಪ್ತಿಯಿಂದ ಮಾಲ್ಪಕ್ಕೆ—ನೀರೇ ಇಲ್ಲದ ಪ್ರದೇಶದಲ್ಲಿ ಮುಂದುವರಿಯುತ್ತಿತ್ತಂತೆ. ಅನೇಕರು ನೀರಿಲ್ಲದೆ ಸಾಯುತ್ತಿದ್ದರಂತೆ. ಅವರು

ಕೃಪೆಮಾಡಿ ಈಗ ಜಿಪ್ತಿಯಿಂದ ಮಾಲ್ಪಕ್ಕೆ ಇರುವ ರಸ್ತೆಯನ್ನು ಮಾಡಿಸಿ ಕೊಟ್ಟರಂತೆ.

ನಾವು ನಮ್ಮ ಮುಂದಿನ ಪ್ರಯಾಣದ ವ್ಯವಸ್ಥೆಗಾಗಿ ಧಾರ್ಚುಲದಲ್ಲಿ ಮೂರು ದಿನ ಉಳಿಯಬೇಕಾಯಿತು. ನಮ್ಮ ಗುಂಪಿನಲ್ಲಿ ಇಬ್ಬರು ವೃದ್ಧರು. ಅವರು ಆಲ್ಮೋರದಿಂದ ಇಲ್ಲಿಯವರೆಗೆ ಕುದುರೆ ಮೇಲೆ ಕುಳಿತುಬಂದರು. ಆದರೆ ಅವರಿಗೆ ಕುದುರೆ ಸವಾರಿ ಸಾಕೂ ಅನ್ನಿಸಿ ಬಿಟ್ಟಿತ್ತು. ಕುದುರೆ ಮೇಲೆ ಕುಳಿತೂ ಕುಳಿತೂ ಅವರ ಬೆನ್ನು ಸುಮ್ಮನೆ ನೋಯುತ್ತಿತ್ತು. ಅವರಿಗೆ ಅದು ಒಂದು ಯಮಯಾತನೆಯಾಗೇ ಕಂಡುಬಂತು. ಆದ್ದರಿಂದ ಅವರು ಉಳಿದ ಯಾತ್ರೆಯ ಭಾಗವನ್ನೆಲ್ಲಾ ದಂಡಿಯಲ್ಲೇ[1] ಪ್ರಯಾಣಮಾಡಿದರು.

ಕೈಲಾಸ-ಮಾನಸಸರೋವರ ಯಾತ್ರೆಯನ್ನು ಕಾಲುನಡಿಗೆಯಲ್ಲಿ ಮಾಡುವುದೇ ಲೇಸು. ಸಾಕಾದಾಗ ಕುಳಿತುಕೊಳ್ಳಬಹುದು, ಬೇಕಾದಾಗ ಎದ್ದು ನಡೆಯಬಹುದು. ಒಬ್ಬರ ಹಂಗೂ ಇಲ್ಲ. ಯಾರನ್ನೂ ಆಶ್ರಯಿಸ ಬೇಕಾಗೂ ಇರುವುದಿಲ್ಲ. "ಕುದುರೆ ಪ್ರಯಾಣ ಸುಖವಲ್ಲವೆ?" ಎಂಬ ಭಾವನೆ ಅನೇಕರಿಗೆ ಬರಬಹುದು. ಇದು, "ಕಟ್ಟಿಕೊಂಡವನಿಗೇ ಗೊತ್ತು ಸಂಸಾರದ ಪಾಡು!" ಎಂದು ಜನ ಹೇಳುವ ಹಾಗೇ ಸುಖಕರವಾದ್ದು. ಕುದುರೆಯ ಪ್ರಯಾಣ ಸುಖಕರ ಎಂಬುದು ಕೇವಲ ಭ್ರಾಂತಿ ಮಾತ್ರ. ಮೈದಾನದಲ್ಲೇನೊ ಸುಖವಾಗಿ ತೋರ ಬಹುದು, ಆದರೆ ಬೆಟ್ಟದ ದಾರಿಯಲ್ಲಿ ಅದು ಒಂದು ವಿಧದ ನರಕಯಾತ ನೆಯೇ. ತಿಟ್ಟು ಸಿಕ್ಕಿದಾಗ ಕುದುರೆಯನ್ನು ಹತ್ತಬೇಕು, ಇಳಿಜಾರು ಸಿಕ್ಕಿದಾಗ ಅದರಿಂದ ಇಳಿದುಬಿಡಬೇಕು. ಹಾಗೆ ಇಳಿಯದಿದ್ದರೆ ಭೂಮಿಯ ಗುರುತ್ವಾಕರ್ಷಣೆ ಕುದುರೆ, ಸವಾರ ಇಬ್ಬರನ್ನೂ ಕೆಳಕ್ಕೆ ಎಳೆದು ಹಳ್ಳಕ್ಕೆ ಬೀಳಿಸಿಬಿಡುತ್ತದೆ. ಕುದುರೆ ತಿಟ್ಟನ್ನು ಹತ್ತುವಾಗಲಂತೂ ಮುಂದಕ್ಕೆ ಬಾಗಿ ಕೂರಲೇಬೇಕು. ಇಲ್ಲದಿದ್ದರೆ ಕುದುರೆಗೆ ಅದು ಒಂದು ಯಮಯಾತನೆಯೇ; ಸವಾರನಿಗೂ ಪ್ರಾಣಭಯ.

ಹಾಗಾದರೆ ದಂಡಿಯಲ್ಲಿ ಪ್ರಯಾಣ? ಇದನ್ನು ನಾಲ್ಕು ಜನ ಹೊರ ಬೇಕಾಗುತ್ತದೆ. ಸವಾರ ಸ್ಥೂಲಕಾಯನಾಗಿದ್ದರಂತೂ ಆರು ಜನವಾದರೂ

---

1. ಇದು ಒಂದು ವಿಧವಾದ ಆರಾಮ ಕುರ್ಚಿ. ಇದನ್ನು ಹೊರಲು ನಾಲ್ಕು ಜನ ಬೇಕಾಗುತ್ತದೆ.

ಬೇಕೇ ಬೇಕು. ಅವರೆಲ್ಲ ಒಂದೇ ಎತ್ತರದವರಾಗಿರಬೇಕು. ಇಲ್ಲದಿದ್ದರೆ ಕುಂಟು ಕುದುರೆ ಮೇಲೆ ಸವಾರಿ ಮಾಡಿದಂತಾಗುತ್ತದೆ.

ಈ ಭಾಗದ ದಾರಿ ಅಷ್ಟು ಕಿರಿದು, ನಡೆಯುವಾಗ ಆಳುಗಳ ಕಾಲೇನಾದರು ಎಡವಿಬಿಟ್ಟದ್ದೇ ಆದರೆ ಅಥವಾ ಜಾರಿಬಿಟ್ಟದ್ದೇ ಆದರೆ ಸವಾರ-ಗಿವಾರ ಯಾರ ಮೂಳೆಯೂ ಸಿಕ್ಕುವ ಹಾಗೇ ಇಲ್ಲ. ಕಾಳೀದೇವಿ ಎಲ್ಲರನ್ನೂ ಸ್ವಾಹಾಮಾಡಿಕೊಂಡುಬಿಡುತ್ತಾಳೆ. ಆದರೆ ಕೈಲಾಗದವರು ಪ್ರಾಣ ಕೈಗೆ ತೆಗೆದುಕೊಂಡು ವಿಧಿಯಿಲ್ಲದೆ ಇದರ ಮೇಲೊ ಅಥವಾ ಕುದುರೆ ಮೇಲೊ ಪ್ರಯಾಣ ಬೆಳಸಬೇಕು. ಆದ್ದರಿಂದ ಕೈಲಾಸ-ಮಾನಸಸರೋವರ ಯಾತ್ರೆಯನ್ನು ತಾರುಣ್ಯದಲ್ಲಿ ಕೈಗೊಂಡರೆ ಸುಖವಾಗಿ ಕಾಲುನಡಿಗೆಯಲ್ಲೇ ಇಡೀ ದಾರಿಯನ್ನು ನಡೆದು ಎಲ್ಲವನ್ನೂ ಆನಂದದಿಂದ ನೋಡಿ ಬರಬಹುದು.

## ಧಾರ್ಚುಲದಿಂದ ಖೇಲಕ್ಕೆ.

೩,೦೦೦ ಅಡಿ ಎತ್ತರದಿಂದ ೫,೫೦೦ ಅಡಿ ಎತ್ತರಕ್ಕೆ. ದೂರ ೧೦ ಮೈಲಿ.

ಪ್ರಯಾಣ ಪ್ರಾತಃಕಾಲ ೫-೩೦ ರಿಂದ ಬೆಳಗಿನ ೧೧ ರ ವರೆಗೆ.

ತಾ|| ೧೨-೬-'೫೧, ಮಂಗಳವಾರ.

ನಾವು ಇಂದಿನಿಂದ ಗರ್ಭಿಯಾಂಗ್ ಮುಟ್ಟುವವರೆಗೆ ಕಾಳೀನದಿಯ ಬಲ ದಡದಲ್ಲೇ ಮುಂದುವರಿಯಬೇಕು. ಧಾರ್ಚುಲದಿಂದ ಎಂಟು ಮೈಲಿ ದೂರ ಸ್ವಲ್ಪ ಹೆಚ್ಚು ಕಡಮೆ ಮಟ್ಟವಾದ ರಸ್ತೆ ಇದೆ. ಉಳಿದ ಎರಡು ಮೈಲಿ ರಸ್ತೆ ಬಹಳ ಕಡಿದಾದ ಒಂದು ತಿಟ್ಟಿನ ಮೇಲೆ ಹಾದುಹೋಗುತ್ತದೆ. ಈ ಎರಡು ಮೈಲಿ ನಮ್ಮನ್ನು ಬಹಳವಾಗಿ ಸಾಕುಮಾಡಿಬಿಟ್ಟಿತು. ಎಂದಿಗೆ ಖೇಲವನ್ನು ಮುಟ್ಟೇವು ಅನ್ನುತ್ತಲೇ ಕಾಲುಹಾಕಿದೆವು. ಈ ಎರಡು ಮೈಲಿ ದಾರಿಯಲ್ಲಿ ಗಿಡಮರಗಳು ಬಹಳ ಕಡಮೆ. ವಿಪರೀತ ಬಿಸಿಲು. ದಾಹ ಹೃದಯವನ್ನು ಸುಮ್ಮನೆ ಕಿತ್ತು ತಿನ್ನಲಾರಂಭಿಸಿತು. ಹಾಗೇ ಮುಂದುವರಿಯುತ್ತಿರುವಾಗ ಸೊಂಪಾಗಿ ಬೆಳೆದಿರುವ ಎರಡು ಅರಳಿ ಮರಗಳು ಕಣ್ಣಿಗೆ ಬಿದ್ದುವು. ಹತ್ತಿರವೇ ಒಂದು ಝರಿ ಹರಿಯುತ್ತಿತ್ತು. ಆದರೆ ಖೇಲ ಮಾತ್ರ ಇನ್ನೂ ಕಣ್ಣಿಗೆ ಬೀಳುತ್ತಿಲ್ಲ. ಹೇಗೋ ಮಾಡಿ ಆ ಅರಳಿ ಮರದ ಹತ್ತಿರಕ್ಕೆ ಬಂದು ಸ್ವಲ್ಪ ಹೊತ್ತು ವಿಶ್ರಮಿಸಿಕೊಂಡೆವು. ಅಲ್ಲಿಂದ ಒಂದು ಫರ್ಲಾಂಗು ದೂರದಲ್ಲಿ ಇನ್ನೊಂದು ಅರಳಿ ಮರ ಕಾಣಿಸಿ

ಕೊಂಡಿತು. ಅದರ ಹತ್ತಿರಕ್ಕೆ ಬಂದೊಡನೆ ಪ್ರತಾಪಸಿಂಗ್ 'ನಮ್ಮನ್ನು ಎದುರುಗೊಂಡ. ಆತನ ಮನೆ ಅಲ್ಲೇ. ಆ ಮರದ ಕೆಳಗೆ ಒಂದು ಧರ್ಮ ಶಾಲೆ ಇದೆ. ಅಲ್ಲೇ ನಾವು ಇಂದು ತಂಗಬೇಕು. ನಮ್ಮ ಇಂದಿನ ಪ್ರಯಾಣ ಇಷ್ಟು ಬೇಗ ಮುಗಿದುಹೋಗುತ್ತದೆ ಎಂದು ನಾವು ಭಾವಿಸಿರಲಿಲ್ಲ. ಏಕೆಂದರೆ ಖೇಲ ಗ್ರಾಮ ಇಲ್ಲಿಂದ ಇನ್ನೂ ಒಂದು ಮೈಲಿ ದೂರ. ಇಷ್ಟು ಬೇಗ ತಂಗುವ ಜಾಗ ದೊರಕಿದುದಕ್ಕಾಗಿ ಕಾಲುಗಳಿಗೆ ಬಹಳ ಆನಂದ ವಾಯಿತು. ಆ ಎರಡನೆ ಅರಳಿ ಮರಕ್ಕೆ ಕಟ್ಟೆ-ಗಿಟ್ಟೆ ಕಟ್ಟಿಸಿ ಆ ಜಾಗವನ್ನು ಬಹಳ ಚೆನ್ನಾಗಿ ಇಟ್ಟಿದ್ದರು. ಅದರ ನೆರಳಿನಲ್ಲಿ ಹಾಯಾಗಿ ಕುಳಿತು ಕೊಂಡೆವು.

ನಮ್ಮ ಆಳುಗಳು ನಮ್ಮ ಹಾಸಿಗೆ ಬಟ್ಟೆಗಳನ್ನು ಬಿಚ್ಚಿ ಧರ್ಮಶಾಲೆ ಯಲ್ಲಿ ಅಣಿಮಾಡಿದರು. ಅಲ್ಲಿಗೆ ಹೋಗಿ ನೋಡುತ್ತೇವೆ ಗೋಡೆ ತಿಗಣೆ ಮಯ. ಒಡನೆಯೆ ಆ ಧರ್ಮಶಾಲೆಯಲ್ಲಿ ಸಾಮಾನುಸರಂಜಾಮುಗಳನ್ನು ಮಾತ್ರ ಇಟ್ಟು ಹಾಸಿಗೆ ಬಟ್ಟೆಬರೆಗಳನ್ನು ಅರಳಿ ಮರದ ಹತ್ತಿರಕ್ಕೆ ತಂದಿಟ್ಟುಕೊಂಡು ಅದರ ಹತ್ತಿರವೇ ರಾತ್ರಿಯನ್ನು ಕಳೆದೆವು.

ಪ್ರತಾಪಸಿಂಗನ ಮನೆಯ ಮೇಲೆ ಒಂದು ಸೀಗುಂಬಳ ಕಾಯಿ ಬೆಳೆದಿತ್ತು. ಈಗ ಹನ್ನೆರಡು ದಿನದಿಂದ ಬರೀ ಆಲೂಗಡ್ಡೆ ಈರುಳ್ಳಿ ಪಲ್ಯ ತಿಂದು ಸಾಕಾಗಿತ್ತು. ನಮ್ಮೆಲ್ಲರ ಕಣ್ಣೂ ಅದರ ಮೇಲೆ ಹೋಯಿತು. ಆತ ಆನಂದದಿಂದ ಅದನ್ನು ನಮಗೆ ಕಿತ್ತುಕೊಟ್ಟ. ಆಗ ಅನಿಸಿತು: "ಕಷ್ಟ ಎಂಬುದು ಇಲ್ಲದಿದ್ದರೆ ಸುಖದ ಮಹತ್ತು ಗೊತ್ತಾಗುತ್ತದೆಯೆ? ಕತ್ತಲೆ ಇಲ್ಲದಿದ್ದರೆ ಬೆಳಕಿನ ಮಹತ್ತು ಅರಿವಿಗೆ ಬರುವುದೆ? ದುಷ್ಟರಿಲ್ಲ ದಿದ್ದರೆ ಸಾಧುಸಜ್ಜನರ ಶ್ರೇಷ್ಠತೆ ಎದ್ದು ಕಾಣುವುದೆ? ಈ ಸಂಸಾರ ದುಃಖಮಯವಾಗಿಲ್ಲದಿದ್ದರೆ ಮುಕ್ತಿಗಾಗಿ, ಭಗವಂತನ ಸಾಕ್ಷಾತ್ಕಾರಕ್ಕಾಗಿ ಯಾರಾದರೂ ಹಾತೊರೆಯುತ್ತಿದ್ದರೆ? ಎಂದಿಗೂ ಇಲ್ಲ. ಭಗವಂತನ ಸೃಷ್ಟಿ ಎಷ್ಟು ಅದ್ಭುತವಾದ್ದು. ಜನ ಹೇಳುತ್ತಾರಲ್ಲ: 'ಭಗವಂತ ಏಕೆ ಇಂಥಾ ಕೆಟ್ಟ ಜಗತ್ತನ್ನು ಸೃಷ್ಟಿಸಿದ? ನಾವಾಗಿದ್ದರೆ ಇದರಲ್ಲಿ ಹಾಲು ತುಪ್ಪವೇ ಹರಿಯುವಂತೆ ಮಾಡಿಬಿಡುತ್ತಿದ್ದೆವು' ಎಂಬುದಾಗಿ; ಇದರಲ್ಲಿ ಅರ್ಥವಿದೆಯೆ? ಇಲ್ಲ. ಒಂದು ಕಿಂಚಿತ್ತೂ ಇಲ್ಲ. ಇದು ಭಗವಂತನ ಹಿರಿಮೆ ಯನ್ನು ಒಂದು ಕಿಂಚಿತ್ತೂ ಅರಿಯದವರಾಡುವ ಮಾತು. ಭಗವಂತ

ನಮ್ಮ ಈ ತೊದಲು ಮಾತುಗಳನ್ನು ಕೇಳಿ ಸುಮ್ಮನೆ ನಗಬಹುದು. ಆತನ ಕೃಪೆಯೊಂದಿಲ್ಲದಿದ್ದರೆ ಆತನ ಈ ಸೃಷ್ಟಿವೈಚಿತ್ರ್ಯವನ್ನು ಅರಿಯಲು ಸಾಧ್ಯವೇ? ಆತನ ನಿಜಸ್ವರೂಪವನ್ನು ಅರಿಯಲು ಸಾಧ್ಯವೇ?"

ಈ ಗ್ರಾಮದಲ್ಲಿ ಬಾಳೆ ಗಿಡಗಳು ಹೇರಳವಾಗಿ ಬೆಳೆದಿದ್ದುವು. ನಮಗೆ ಬಾಳೆ ಹಣ್ಣು ಯಥೇಷ್ಟವಾಗಿ ದೊರೆಯಿತು. ತುಪ್ಪ ಇಲ್ಲಿ ಬಹಳ ಅಗ್ಗ. ನಾವೂ ಇಲ್ಲಿ ಸ್ವಲ್ಪ ತುಪ್ಪ ಕೊಂಡುಕೊಂಡೆವು.

ನಾವು ಮಾರನೆ ದಿನ ಹತ್ತಬೇಕಾಗಿರುವ ತಿಟ್ಟು ಇಲ್ಲಿಂದಲೇ ಸ್ಪಷ್ಟ ವಾಗಿ ಕಾಣುತ್ತಿತ್ತು. ಅದರಲ್ಲಿ ದಾರಿ ಹಾವಿನ ಗತಿಯೋಪಾದಿಯಲ್ಲಿ ಹತ್ತಿ ಅದರ ತುದಿಯನ್ನು ಮುಟ್ಟಿತ್ತು. ಅದನ್ನು ನೋಡಿ ಮನಸ್ಸು ಇಂದೇ ಹೇಳಲಾರಂಭಿಸಿತು: "ಹೇಗಪ್ಪ, ನಾಳೆ ಅದನ್ನು ಹತ್ತುವುದು?" ಆ ತಿಟ್ಟು ಸ್ವರ್ಗವನ್ನೇ ಭೇದಿಸುವಂತ್ತಿತ್ತು. ಮುಗಿಲು ಎಲ್ಲೋ ಅದರ ಮಧ್ಯ ಭಾಗದವರೆಗೆ ಮಾತ್ರ ಹತ್ತಿ ಸಂಚರಿಸುತ್ತಿತ್ತೇ ವಿನಾ ಅದರ ತುತ್ತ ತುದಿಯನ್ನು ಮುಟ್ಟಲು ಅದಕ್ಕೂ ಎದೆಯಿರಲಿಲ್ಲ ನಾವು ಮಾರನೆ ದಿನ ಆ ತುದಿಯನ್ನು ಮುಟ್ಟಬೇಕಾದರೆ ಮುಗಿಲಿಗಿಂತಲೂ ಧೈರ್ಯಶಾಲಿಗಳಾ ದವರಾಗೇ ಆಗಬೇಕಾಗಿತ್ತು. ಆದರೆ ಮಾನಸಿಕ ಬಲವೊಂದಿದ್ದರೆ, ಆತ್ಮಬಲ ವೊಂದಿದ್ದರೆ, ಭಗವಂತನ ಕೃಪೆಯೊಂದಿದ್ದರೆ ಏನು ತಾನೆ ಸಾಧ್ಯವಿಲ್ಲ?

ರಾತ್ರಿಯಾಗುತ್ತ ಆಗುತ್ತ ಮಿಂಚು ಗುಡುಗುಗಳ ಆರ್ಭಟ ಅಧಿಕಾ ಧಿಕವಾಗುತ್ತಾ ಬಂತು. ಮೋಡ ಕಟ್ಟಿರುವುದನ್ನು ನೋಡಿದರೆ ಜಲಪ್ರಳ ಯವೇ ಆಗುವುದೊ ಏನೊ ಎಂಬಂತೆ ತೋರಲಾರಂಭಿಸಿತು. ಆದರೆ ವಿಪರೀತ ಗಾಳಿ ಎದ್ದು ಮೋಡಗಳನ್ನು ಬೇರೆ ಕಡೆಗೆ ಚೆದುರಿಸಿಬಿಟ್ಟಿತು. ಎಲ್ಲೋ ಕೆಲವು ಹನಿ ಮಾತ್ರ ಬಿತ್ತು. ನಮ್ಮ ಜೀವನದಲ್ಲಿ ಒಮ್ಮೊಮ್ಮೆ ನಾವು ಒಂದಾದಮೇಲೊಂದು ಬರುವ ಕಷ್ಟಗಳನ್ನು ನೋಡಿ ಸುಮ್ಮನೆ ಹತಾಶರಾಗಿಬಿಡುತ್ತೇವೆ. ಆದರೆ ಭಗವಂತನ ಕೃಪಾರೂಪದ ಗಾಳಿ ಎದ್ದಿತು ಎಂದರೆ ದುಃಖರೂಪದ ಮೋಡಗಳು ಚೆದುರಿಹೋಗಲು ಎಷ್ಟು ಕಾಲ ತಾನೆ ಬೇಕು? ಒಂದೇ ಒಂದು ಕ್ಷಣ.

## ಖೇಲದಿಂದ ಸಿರ್ದಾಂಗಿಗೆ

**೫,೫೦೦ ಅಡಿ ಎತ್ತರದಿಂದ ೭,೦೦೦ ಅಡಿ ಎತ್ತರಕ್ಕೆ. ದೂರ ೧೨ ೧/೨ ಮೈಲಿ.**

**ಪ್ರಯಾಣ ಬೆಳಗಿನ ೫ ರಿಂದ ಅಪರಾಹ್ಣ ೧-೩೦ ರ ವರೆಗೆ.**

**ತಾ॥ ೧೩-೬-'೫೧, ಬುಧವಾರ.**

ಖೇಲದಿಂದ ಧೌಲೀಗಂಗೆಯ ಸೇತುವೆಯವರೆಗೆ ಸುಮಾರು ಒಂದೂವರೆ ಮೈಲಿ ಬಹಳ ಕಡಿದಾದ ಇಳಿಜಾರು. ಇದು ಆಸ್ಕೋಟಿನಿಂದ ಗೌರೀಗಂಗೆಗೆ ಇಳಿದ ನೆನಪನ್ನು ತಂದಿತು. ಧೌಲೀಗಂಗೆ ಕೂಡ ಇಲ್ಲಿ ಬಹಳ ರಭಸದಿಂದ ಹರಿಯುತ್ತದೆ. ನಿನ್ನೆ "ಹೇಗಪ್ಪ ಹತ್ತುವುದು?" ಎಂದು ನಾವು ಹೆದರಿದ್ದ ತಿಟ್ಟು ಈಗ ಧೌಲೀಗಂಗೆಯನ್ನು ದಾಟಿದೊಡನೇ ಎದುರಿಗೆ ನಿಂತು ಹೇಳಿತು: "ಬನ್ನಿ! ಹತ್ತಿನೋಡೋಣ ನಿಮ್ಮ ತ್ರಾಣವನ್ನ!" ಎಂದು. ನಿನ್ನೆ ಮನಸ್ಸು ಹಾಗೆ ಹೆದರಿದುದೇನೊ ನಿಜ, ಆದರೆ ಇಂದು ಅದು ಭಗವಂತನ ಕೃಪೆಯಿಂದ ಬಹಳ ಬಲಯುತವಾಗಿ ಆಗಿಬಿಟ್ಟಿತ್ತು. ಅದು ಘರ್ಜಿಸಿತು: "ನಾವೆಂದಿಗೂ ರಣರಂಗದಿಂದ ಹಿಂದಿರುಗುವವರಲ್ಲ. ನಿನ್ನನ್ನು ಗೆಲ್ಲಲೇ ಬಂದಿದೇವೆ. ಇಲ್ಲದಿದ್ದರೆ ಆ ಪ್ರಯತ್ನದಲ್ಲಿ ಮಡಿಯಲು ಸಿದ್ಧರಾಗೇ ಇದೇವೆ. ನಿಲ್ಲಿಸು ನಿನ್ನ ಬಾಯನ್ನ! ನೋಡು ಈಗ ನಾವು ಹತ್ತಿಯೇಬಿಡುತ್ತೇವೆ!"

ಆ ತಿಟ್ಟಿನ ಮೇಲೆ ಸುಮಾರು ಎರಡೂವರೆ ಮೈಲಿ ಹತ್ತಬೇಕು. ಈಗ ಅದರ ತುದಿಯನ್ನು ನೋಡೋಣ ಎಂದರೆ ಕತ್ತನ್ನು ತೊಂಬತ್ತು ಡಿಗ್ರಿಗೆ ತಿರುಗಿಸಬೇಕಾಯಿತು. ಆದರೂ ಹೆದರದೆ ಹತ್ತಲು ಶುರುಮಾಡೇ ಬಿಟ್ಟೆವು. ಅದನ್ನು ಹತ್ತಿಮುಗಿಸುವುದರಲ್ಲಿ ಮನಸ್ಸಿಗಿಲ್ಲದಿದ್ದರೂ ಶರೀರಕ್ಕೆ ಬಹಳ ದಣಿವು ಆಗಿಬಿಟ್ಟಿತು. ಬಳಿಕ ಸ್ವಲ್ಪ ದೂರ ಮಟ್ಟವಾದ ರಸ್ತೆ ಸಿಕ್ಕಿತು. ಅದನ್ನು ಮುಗಿಸುವುದರೊಳಗೇ ಇನ್ನೊಂದು ತಿಟ್ಟು ಕಾಣಿಸಿಕೊಂಡಿತು. ಅದರ ಮೇಲೆ ಎರಡು ಮೈಲಿ ದೂರ ನಡೆಯಬೇಕು. ಅದನ್ನೂ ಹತ್ತಿಯೇಬಿಟ್ಟೆವು. ಅಷ್ಟರಲ್ಲಿ ಮನಸ್ಸಿಗೂ ಸಾಕಾಗಿಹೋಯಿತು. ಬಳಿಕ ಸಿರ್ದಾಂಗನ್ನು ತಲುಪಿ ಅಲ್ಲಿ ಒಂದು ಪ್ರಾಥಮಿಕ ಶಾಲೆಯಲ್ಲಿ ಇಳಿದುಕೊಂಡೆವು. ಆ ಶಾಲೆಯ ನೆಲವೆಲ್ಲಾ ಬರೀ ದೂಳಾದ ದೂಳೇ. ಕತ್ತೆಗಳ ಕೊಟ್ಟಿಗೆಯಂತೆ ಅಂದಚಂದವಾಗಿತ್ತು. ಬಾಲಕಬಾಲಕಿಯರು ತಮ್ಮ ತಮ್ಮ ಆಸನಗಳನ್ನು ಮನೆಯಿಂದಲೇ ತಂದು ಅದರ ಮೇಲೆ ಕುಳಿತುಕೊಳ್ಳುತ್ತಾರಂತೆ. ಭಗವಂತನ ಕೃಪೆಯಿಂದ ಆ ಊರಿನವರು ನಮಗೆ ಮೂರು ಬೆತ್ತದ ಚಾಪೆಗಳನ್ನು ತಂದುಕೊಟ್ಟರು. ಅವನ್ನು ಹಾಸಿ ಅವುಗಳ ಮೇಲೆ ನಮ್ಮ ಹಾಸಿಗೆ ಬಟ್ಟೆಗಳನ್ನು ಹಾಕಿ ಕುಳಿತುಕೊಂಡೆವು.

ಈ ಶಾಲೆ ಒಂದು ಎತ್ತರವಾದ ಜಾಗದಲ್ಲಿದೆ. ಇದರ ಕೆಳಭಾಗದಲ್ಲಿ ಗೋಧಿ ಹೊಲಗಳು ಸಾಲು ಸಾಲಾಗಿ ಹಬ್ಬಿವೆ. ಗೋಧಿ ಜೆಳೆದು ಹೊಂಬಣ್ಣಕ್ಕೆ ಬಂದಿತ್ತು. ಆ ದೃಶ್ಯ ಬಹಳ ಮನೋಹರವಾಗಿ ಕಂಡಿತು. ಇಲ್ಲಿಂದಲೂ ಹಿಮಾವೃತ ಬೆಟ್ಟಗಳನ್ನು ನೋಡಬಹುದು. ಸ್ವಲ್ಪ ದೂರದಲ್ಲಿ ತಪ್ಪಿಸಿಕೊಂಡುಹೋಗಿದ್ದ ಕಾಳೀನದಿ ಇಲ್ಲಿ ಬಹಳ ಆಳದಲ್ಲಿ ಹರಿಯುತ್ತಿರವುದು ಕಣ್ಣಿಗೆ ಬಿತ್ತು. ಇಲ್ಲಿನ ಪ್ರಕೃತಿ ಸೌಂದರ್ಯ ಬಹಳ ಆನಂದದಾಯಕವಾಗಿದೆ. ನೊಣಗಳು ಇಲ್ಲಿ ಬಹಳ ಜಾಸ್ತಿ. ಅವುಗಳ ಪರಮಾವಧಿಯನ್ನು ಮುಂದಿನ ಊರಾದ ಸಿರ್ಖಾದಲ್ಲಿ ನೋಡಬಹುದು. ನಾವು ಕೈಲಾಸಗಿರಿಯಿಂದ ಹಿಂದಿರುಗಿ ಬಂದಾಗ ಆ ಊರಿನಲ್ಲೇ ತಂಗಬೇಕಾಯಿತು. ಬೇಡ ಬೇಡ ಎಂದರೂ ಒತ್ತಾಯದಿಂದ ನಮ್ಮ ಮೈ ಕೈ ಮೇಲೆಲ್ಲಾ ಕುಳಿತು ತಮ್ಮ ಆದರವನ್ನು ತೋರಿಸುತ್ತಿದ್ದುವು. ಅವು ಅಲ್ಲಿ ಅಷ್ಟು ವಿರಳ, ರಾತ್ರಿ ಮಲಗಿ ಬೆಳಗ್ಗೆ ಏಳುವುದರಲ್ಲೇ ಲಕ್ಷಾಂತರ ನೊಣಗಳು ನಮ್ಮ ಹಾಸಿಗೆ ಮೇಲೆ ಸತ್ತುಬಿದ್ದಿದ್ದುವು !

## ಸಿರ್ದಾಂಗಿನಿಂದ ಜಿಪ್ತಿಗೆ.

೭,೦೦೦ ಅಡಿ ಎತ್ತರದಿಂದ ೮,೦೦೦ ಅಡಿ ಎತ್ತರಕ್ಕೆ. ದೂರ ೧೧ ೧/೨ ಮೈಲಿ.

ಪ್ರಯಾಣ ಪ್ರಾತಃಕಾಲ ೫-೩೦ ರಿಂದ ಅಪರಾಹ್ಣ ೧-೩೦ ರ ವರೆಗೆ.

ತಾ|| ೧೪-೬-'೫೧, ಗುರುವಾರ

ಇಲ್ಲಿಂದ ಮುಕ್ಕಾಲು ಮೈಲಿ ಕೆಳಕ್ಕೆ ಇಳಿದು, ಬಳಿಕ ಬಹಳವಾಗಿ ವಾಲ್‌ನಟ್ (ಮಹಾಫಲ) ಮರಗಳಿಂದ ಕೂಡಿದ ಒಂದು ದಟ್ಟವಾದ ಕಾಡಿನ ಮೂಲಕ ನಡೆಯಬೇಕು. ಅದರಲ್ಲಿ ಎರಡೂಮುಕ್ಕಾಲು ಮೈಲಿ ದೂರ ನಡೆಯುವುದರಲ್ಲಿ ಸಮುದ್ರ ಮಟ್ಟದಿಂದ ೯,೮೦೦ ಅಡಿ ಎತ್ತರಕ್ಕೆ ಹತ್ತಬೇಕಾಗುತ್ತದೆ. ಅನಂತರ ಅದೇ ದಟ್ಟವಾದ ಕಾಡಿನ ಮೂಲಕ ಕೆಳಕ್ಕೆ ಇಳಿಯಬೇಕು. ಈ ಕಾಡು ಸ್ವಲ್ಪ ಭಯಂಕರವಾಗೇ ಕಂಡಿತು. ದೊಡ್ಡ ದೊಡ್ಡ ಕಪಿಗಳು (ಆಂಜನೇಯ ಕಪಿಗಳು) ಮರದಿಂದ ಮರಕ್ಕೆ ನೆಗೆಯುತ್ತ ಲೀಲಾವಿನೋದಗಳಲ್ಲಿ ತೊಡಗಿದ್ದುವು. ದಾರಿಯ ಉದ್ದಕ್ಕೂ ಕೊಳೆತುಬಿದ್ದಿದ್ದ ತರಗೆಲೆಗಳಿಂದ ಉದ್ಭವವಾದ ಒಂದು ವಿಧವಾದ ಸೊಳ್ಳೆಗಳು ದಾರಿಗರನ್ನು ಆನಂದದಿಂದ ಮುತ್ತುತ್ತಿದ್ದುವು. ಅವು ಕಡಿದ ಎಡೆಗಳಲ್ಲೆಲ್ಲಾ ಕಜ್ಜಿಯಂಥ ವ್ರಣಗಳಾಗುವ ಸಂಭವ. ಆದ್ದರಿಂದ ಕೈಕಾಲುಗಳಿಗೆ

ಪೂರ್ಣವಾಗಿ ಕೈಕಾಲುಚೀಲಗಳನ್ನು ಹಾಕೇ ಈ ಜಾಗದಲ್ಲಿ ಮುಂದು ವರಿಯಬೇಕು. ಈ ಕಾಡಿನಲ್ಲಿ ಬಹಳ ಎತ್ತರಕ್ಕೆ ಹತ್ತಬೇಕಾಗಿಬಂದರೂ ಮರಗಳ ನೆಳಲು, ತಂಪಾದ ಹವ, ಮನಮೋಹಕ ಪ್ರಕೃತಿಸೌಂದರ್ಯ ಇವುಗಳ ದೆಸೆಯಿಂದ ನಮಗೆ ಅಷ್ಟು ಆಯಾಸವಾಗಲಿಲ್ಲ. ವಾಲ್‌ನಟ್ ಮರಗಳಂತೂ ಹೂವಿನಿಂದ ಸುಮ್ಮನೆ ತುಂಬಿದ್ದುವು. "ಅವನ್ನು ನೋಡು ತ್ತಲೇ ಸುಮ್ಮನೆ ಇಲ್ಲೇ ಇದ್ದೇಬಿಡೋಣವೆ?" ಎಂಬುದಾಗಿ ಅನ್ನಿಸುತ್ತಿತ್ತು.

ಈ ಕಾಡನ್ನು ದಾಟಿದನಂತರ ಒಂದು ಪುಟ್ಟ ನದಿಯನ್ನು ದಾಟಿದೆವು. ಬಳಿಕ ಒಂದೂವರೆ ಮೈಲಿ ದೂರ ಒಂದು ಸಾಮಾನ್ಯ ಎತ್ತರದ ತಿಟ್ಟಿನ ಮೇಲೆ ನಡೆದು ಜಿಪ್ತಿಯನ್ನು ಮುಟ್ಟಿ ಅಲ್ಲಿ ಒಬ್ಬ ವರ್ತಕನ ಅಂಗಡಿಯ ಮೇಲ್ಮಾಳಿಗೆಯಲ್ಲಿ ಇಳಿದುಕೊಂಡೆವು. ಆತ ಬಹಳ ಒಳ್ಳೆಯವ. ತನ್ನ ಮನೆಯ ಬಲಭಾಗದಲ್ಲಿ ಬಹಳ ಸುಂದರವಾದ ಡಾಲಿಯಾ ಗಿಡಗಳನ್ನು ಬೆಳಸಿದ್ದ. ಸಿರ್ದಾಂಗಿನ ಬಳಿ ಕಾಣಿಸಿಕೊಂಡಿದ್ದ ಕಾಳೀನದಿ ಮತ್ತೆ ತಪ್ಪಿಸಿಕೊಂಡಿದ್ದು ಈಗ ಈ ಊರಿನ ಹತ್ತಿರ ಬಹಳ ಆಳವಲ್ಲಿ ಹರಿಯುತ್ತಿತ್ತು. ಈ ಸ್ಥಳವೂ ಬಹಳ ಸುಂದರವಾದ ಪ್ರದೇಶವೇ.

ನಾನು ಹಿಂದೆ ವಿವರಿಸಿದ ಬಹಳ ಅಪಾಯಕರವಾದ ರಸ್ತೆ ಇಲ್ಲಿಂದಲೇ ಆರಂಭವಾಗುತ್ತದೆ. ಮಳೆ ಬಂದರೆ ಈ ದಾರಿಯ ಅವಸ್ಥೆ ಏನಾಗುವುದು ಎಂಬುದನ್ನು ಆಗಲೇ ತಿಳಿಸಿದೇನೆ. ಆದರೇನುಮಾಡುವುದು? ಮಳೆ ಹೊಯ್ಯಲು ಆರಂಭಿಸಿಯೇ ಬಿಟ್ಟಿತು. ಅದು ಹೊಯ್ಯುವ ಸ್ವರೂಪ ನೋಡಿದರೆ ಅದು ಬೇಗ ನಿಂತುಹೋಗುವ ಮಳೆಯಂತೆ ಕಾಣಬರಲಿಲ್ಲ. ಆಗಲೇ ಈ ದಾರಿಯ ಸಂಬಂಧವಾಗಿ ಹೆದರಿದ್ದ ಎದೆ ಈಗ ಸುಮ್ಮನೆ ಕಂಪಿಸಲಾರಂಭಿಸಿತು. ಈ ಊರಿನವರು ಹೇಳಿದರು: "ನೀವು ಮಾರನೆ ದಿನವೇ ಮುಂದಕ್ಕೆ ಮುಂದುವರಿಯುವುದು ಮೇಲು. ಇದು ಹೆಚ್ಚು ದಿನವೇ ಹಿಡಿದು ಕೊಳ್ಳುವ ಮಳೆಯಂತೆ ಇದೆ. ಆಗ ರಸ್ತೆ ಇನ್ನೂ ಅಧಿಕವಾಗಿ ಕುಲಗೆಟ್ಟು ಹೋಗುತ್ತದೆ." ಆದ್ದರಿಂದ ಹಿಡಿದ ಮಳೆ ಇನ್ನೂ ಹನಿಯುತ್ತಲೇ ಇದ್ದರೂ ಮಾರನೆ ದಿನ ಆ ಭಯಂಕರ ರಸ್ತೆಗೆ ಸೊಂಟ ಕಟ್ಟಿ ಇಳಿದೇಬಿಟ್ಟೆವು.

**ಜಿಪ್ತಿಯಿಂದ ಮಾಲ್ಪಕ್ಕೆ**

**೮,೦೦೦ ಅಡಿ ಎತ್ತರದಿಂದ ೭,೨೦೦ ಅಡಿ ಎತ್ತರಕ್ಕೆ. ದೂರ ೯ ಮೈಲಿ.**

**ಪ್ರಯಾಣ ಪ್ರಾತಃಕಾಲ ೫-೩೦ ರಿಂದ ಅಪರಾಹ್ಣ ೨-೩೦ ರ ವರೆಗೆ.**

**ತಾ|| ೧೫-೬-'೫೧ ಶುಕ್ರವಾರ.**

ಇಂದಿನ ಬೆಳಗ್ಗೆ ಎದ್ದು ನೋಡುತ್ತೇವೆ ಮಳೆ ಸುಮ್ಮನೆ ಸುರಿಯು ತ್ತಲೇ ಇದೆ. ಭಾವನೆ ಬಂತು: "ಬಹುಶಃ ಕೈಲಾಸಪತಿ ನಮ್ಮ ಹೃದಯ ವನ್ನು ಪರೀಕ್ಷಿಸಲೋಸುಗವೇ ಈ ಪರೀಕ್ಷೆಯನ್ನು ತಂದೊಡ್ಡಿದಾನೆ ಅಂತ ಕಾಣುತ್ತೆ. ನಾವು ನಮ್ಮ ಅಂತರ್ಯವನ್ನು ಆತನಿಗೆ ಬಿಚ್ಚಿ ತೋರಿಸೇ ಬಿಡೋಣ. ನಾವು ಈ ಪ್ರಯತ್ನದಲ್ಲಿ ತೇರ್ಗಡೆ ಆಗಲೇಬೇಕು, ಇಲ್ಲ ದಿದ್ದರೆ ಮಡಿಯಲೇಬೇಕು. ಇಲ್ಲ ಆ ಕಡೆಗೆ, ಇಲ್ಲ ಈ ಕಡೆಗೆ ಯಾವುದಾ ದರೂ ಒಂದು ಆಗಲೇಬೇಕು. ಹೇಡಿಗಳ ಹೃದಯವನ್ನು ಎಂದಿಗೂ ತೋರಿಸೆವು. ಬಂದದ್ದೆಲ್ಲಾ ಬರಲಿ, ಆದದ್ದೆಲ್ಲಾ ಆಗಲಿ. ಒಂದು ಕೈ ನೋಡೇ ಬಿಡೋಣ." ಈ ರೀತಿಯಾದ ಒಂದು ನಿರ್ಧಾರಕ್ಕೆ ಬಂದು ಜಿಪ್ತಿಯನ್ನು ಬಿಟ್ಟು ಹೊರಟೇ ಬಿಟ್ಟೆವು.

ನಮ್ಮ ಈ ಧೈರ್ಯ ನೋಡಿ ಮಳೆ ಏನಾದರೂ ಹೆದರಿ ನಿಂತಿತೆ? ಇಲ್ಲವೇ ಇಲ್ಲ. ನಾವು ಮಾಲ್ಪ ಮುಟ್ಟುವವರೆಗೂ ಒಂದೇ ಸಮನೆ ಹೊಯ್ಯಿತು. ಹೋಗಲಿ, ಆಮೇಲೆ ಏನಾದರು ದಯೆ ದಾಕ್ಷಿಣ್ಯ ತೋರಿತೆ? ಇಲ್ಲವೇ ಇಲ್ಲ. "ನಾನೇನು ಅಂಜುಬುರಕನಲ್ಲ. ನಾನೂ ಒಂದು ಕೈ ನೋಡಿಯೇ ಬಿಡುತ್ತೇನೆ" ಎಂದು ಇಡೀ ಸಾಯಂಕಾಲವೆಲ್ಲಾ, ಇಡೀ ರಾತ್ರಿಯೆಲ್ಲಾ ಹೊಯ್ಯಿತು. "ಖಂಡಿತ ನೀನು ಅಂಜುಬುರಕನಲ್ಲ, ವೀರ. ಒಪ್ಪಿಕೊಳ್ಳುತ್ತೇವೆ ನಿನ್ನ ಸಾಹಸವನ್ನ" ಎಂದು ಹೇಳಿದರೂ ಅದು ಮೊಂಡ ಹುಡುಗನ ಹಾಗೆ ಸ್ವಲ್ಪವೂ ಕಿವಿಗೊಡದೆ ಬೆಳಗಿನ ಹತ್ತು ಘಂಟೆಯುವರೆಗೂ ಹೊಯ್ಯಿತು. ಆದರೆ ನಾವೇನಾದರು ಧೈರ್ಯಗೆಟ್ಟೆವೇ? ಇಲ್ಲ ನಾವು ಅದಕ್ಕೆ ತಕ್ಕ ಎದುರಾಳಿಗಳೇ ಆಗಿದ್ದೆವು.

ಮಳೆ ಬಂದರೆ ಈ ರಸ್ತೆ ಯಾವ ರೀತಿಯಾಗಿ ಆಗುವುದು ಎಂಬು ದನ್ನು ಓದಿದ್ದೆ ಮತ್ತು ಇತರರ ಬಾಯಿಂದ ಕೇಳಿದ್ದೆ. ಈಗ ನೋಡು ತ್ತೇನೆ ಅದರ ಅಪ್ಪನಂತೇ ಇದೆ. ಈಗ ಪ್ರತ್ಯಕ್ಷ ಅದರ ಸಾಕ್ಷಾತ್ಕಾರ. ನಮ್ಮ ನಮ್ಮ ಹೃದಯ ನಮ್ಮನ್ನು ಹೇಳದೆ ಕೇಳದೆ ಭಗವನ್ನಾಮ ಜಪಿಸ ಲಾರಂಭಿಸಿದುವು.

ಅಬ್ಬಾ! ಎಂಥ ಭೀಕರ ರಸ್ತೆ ಇದು! ಒಂದೊಂದು ಜಾಗದಲ್ಲಿ ರಸ್ತೆ ಎಷ್ಟು ಕಿರಿದು! ಒಂದೊಂದು ಜಾಗದಲ್ಲಿ ಏನು ಜಾರುವಿಕೆ! ಮೇಲಕ್ಕೆ ನೋಡಿದರೆ ನೆಪಮಾತ್ರಕ್ಕೆ ಬೆಟ್ಟಕ್ಕೆ ಅಂಟಿಕೊಂಡಿರುವ ಒಂಡೆ ಹೇಳುತ್ತಿವೆ! "ಬಂದೆವು! ಬಂದೆವು! ಇನ್ನೇನು ಬಂದೆವು ನಿಮ್ಮಗಳ ತಲೆ ಮೇಲೆ:

ಜಜ್ಜಿ ನುಚ್ಚುನೂರು ಮಾಡುತ್ತೇವೆ ನಿಮ್ಮನ್ನ ! ಒಂದು ನಿಮಿಷ ತಾಳಿ ! ” ಕೆಳಕ್ಕೆ ನೋಡಿದರೆ ಕಾಳೀನದಿ ಬಂಡೆ ಬಂಡೆಗಳ ಮೇಲೆ ಬಿದ್ದು ಭೋರ್ಗ ರೆಯುತ್ತ ಭಯಂಕರ ವೇಗದಿಂದ, ಪಾತಾಳವೇ ಅಂತ ಹೇಳಬೇಕು, ಅಷ್ಟು ಆಳದಲ್ಲಿ ಮುನ್ನುಗ್ಗುತ್ತ ಹೇಳುತ್ತಿದಾಳೆ: “ ಬಂದಿರಾ, ಬನ್ನಿ ! ನಿಮಗಾಗೇ ಕಾದಿದ್ದೆ. ನಾಲಗೆ ಚಪ್ಪರಿಸುತ್ತಿದೆ. ಒಂದೇ ನಿಮಿಷಕ್ಕೆ ನಿಮ್ಮನ್ನು ಸ್ವಾಹಾಮಾಡಿಕೊಂಡುಬಿಡುತ್ತೇನೆ! ” ಕಾಳಿ ಏನು ಮಾಡಿಯಾಳು ನಮ್ಮನ್ನು ನಾವು ಅವಳ ಹತ್ತಿರಕ್ಕೆ ಹೋಗದೆ ಇದ್ದರೆ ಎಂದರೆ, ಒಮ್ಮೊಮ್ಮೆ ದಾರಿ ಪಾತಾಳಕ್ಕೇ ಇಳಿದು ಆಕೆಯನ್ನು ಸ್ಪರ್ಶಮಾಡುತ್ತದೆ. ಒಂದು ಪಕ್ಷ ನಾವು ಅವಳ ಹತ್ತಿರ ಹೋದಾಗ ಆಕೆ ಸ್ವಾಹಾಮಾಡಿಕೊಳ್ಳಲು ಬಂದರೆ ಓಡಿಬಿಡೋದಲ್ಲವೆ ಎಂವರೆ, ಎಲ್ಲಿಗೆ ಓಡಿಹೋಗುವುದು ? ಹೋಗಲಿ ರಸ್ತೆ ಏನಾದರು ಅಲ್ಲಿಂದಾಚೆಗೆ ಮಟ್ಟವಾಗಿದೆಯೆ ಸ್ವಲ್ಪ ಪ್ರಯತ್ನ ಮಾಡೋಣ ಅನ್ನುವುದಕ್ಕೆ ? ಇಲ್ಲವೇ ಇಲ್ಲ. ಮತ್ತೆ ಸ್ವರ್ಗಕ್ಕೇ ನೇರವಾಗಿ ಹತ್ತಬೇಕು. ದಿಗ್ಭ್ರಮಕಾರಿಯಾದ ಈ ಸನ್ನಿವೇಶದಲ್ಲಿ ಮನಸ್ಸು ನಮ್ಮನ್ನು ಹೇಳದೆ ಕೇಳದೆ ತಾನು ತಾನಾಗೇ ಭಗವಂತನ ಕಡೆಗೆ ಓಡಲಾ ರಂಭಿಸಿತು. ಈ ಅಪಾಯಕರವಾದ ರಸ್ತೆಯನ್ನು ದಾಟಿ ಮುಗಿಸುವವರೆಗೆ ಭಗವಂತನ ಭಾವನೆಯೊಂದು ವಿನಾ ಬೇರೆ ಯಾವ ಭಾವನೆಯೂ ನಮ್ಮ ಹೃದಯದ ಹೊಸಲನ್ನು ಮೆಟ್ಟಲಿಲ್ಲ.

ಜಿಪ್ತಿಯನ್ನು ಬಿಟ್ಟನಂತರ ಬಹಳ ಆಳಕ್ಕೆ ಇಳಿದು ಕಾಳೀನದಿಯ ಪಾತ್ರವನ್ನು ಮುಟ್ಟಿದೆವು. ಬಳಿಕ ಮತ್ತೆ ಆಕಾಶಕ್ಕೇ ಹತ್ತಬೇಕಾಯಿತು. ಇಂದಿನ ಉಳಿದ ದಾರಿಯಲ್ಲಿ ಇದೇ ರೀತಿಯಾಗಿ ಮೂರೊ ನಾಲ್ಕೊ ಸಾರಿ ಹತ್ತಿ ಇಳಿಯಬೇಕಾಯಿತು. ಆಡುಕುರಿಗಳ ಸಾಲು ಎದುರುಬದುರಾಗಿ ಬರುತ್ತಲೇ ಇದ್ದುವು. ದಾರಿಯಲ್ಲಿ ಬಿದ್ದಿದ್ದ ಅವುಗಳ ಹಿಕ್ಕೆ—ವಿಶೇಷತಃ ಹೊಸ ಹಿಕ್ಕೆ—ಅಷ್ಟೊಂದಾಗಿ ಜಾರುತ್ತಿತ್ತು. ಸ್ವಲ್ಪ ಎಚ್ಚರಗೆಟ್ಟೆವೆಂದರೆ ನೇರವಾಗಿ ಕಾಳೀನದಿಗೇ “ ದೊಪ್ ” ಅಂತ ಬೀಳಲೇಬೇಕು. ತತ್ ಕ್ಷಣವೇ ಕೈಲಾಸ !

ಇಂದಿನ ದಾರಿಯ ಈ ಭಾಗದಲ್ಲೇ ನಾನು ಹಿಂದೆ ತಿಳಿಸಿರುವಂತೆ ಕೆಲವು ಕಲ್ಲು ಕಳಚಿಬಿದ್ದು ದಾರಿಯಲ್ಲಿ ಹೋಗುತ್ತಿದ್ದ ಆರು ಮೇಕೆಗಳು ಭೂಗತವಾದುದು ಮತ್ತು ನಮ್ಮ ಕೂಲಿ ಆಳುಗಳಿಗೆ ಸಾಮಾನ್ಯ ಗಾಯ ಗಳಾದುದು.

ಹನ್ನೊಂದು ಘಂಟೆ ಸಮಯಕ್ಕೆ ನಿರ್‌ಜಾನ್ ಎಂಬ ಎಂಬತ್ತು ಅಡಿ ಪ್ರಪಾತದ ಹತ್ತಿರಕ್ಕೆ ಬಂದೆವು. ಇಲ್ಲಿನ ಸುತ್ತಮುತ್ತಲ ದೃಶ್ಯ ಬಹಳ ಮನೋಹರವಾಗಿದೆ. ಈ ಪ್ರಪಾತದ ನೀರು ಹತ್ತಿರವೇ ಹರಿಯುತ್ತಿರುವ ಕಾಳೀನದಿಗೆ ಹೋಗಿ ಸೇರುತ್ತದೆ. ಇದರ ಮೇಲಿನ ಸೇತುವೆಯನ್ನು ದಾಟಿದ ಒಡನೇ ಒಂದು ಕಡಿದಾದ ತಿಟ್ಟನ್ನು ಹತ್ತಿ ಮತ್ತೆ ಒಂದು ಫರ್ಲಾಂಗಿನಷ್ಟು ದೂರದ ಒಂದು ಇಳಿಜಾರನ್ನು ಇಳಿಯಬೇಕು. ಈ ಇಳಿಜಾರಿನಲ್ಲೇ ನಮ್ಮ ಎರಡನೆ ಪರೀಕ್ಷೆ. ಈ ಇಳಿಜಾರು ಅಷ್ಟೊಂದಾಗಿ ಜಾರುತ್ತಿತ್ತು, ಅಲ್ಲಿ ನಮ್ಮಲ್ಲಿ ಜಾರಿಬೀಳದವರೇ ಇಲ್ಲ. ನಮ್ಮ ಬುದ್ಧಿಶಕ್ತಿಯನ್ನೆಲ್ಲಾ ಉಪಯೋಗಿಸಿ, ಜಾರಿಬಿದ್ದರೂ ಅಪಾಯವಾಗದ ಹಾಗೆ ನೋಡಿಕೊಂಡು ಇಂದಿನ ರಸ್ತೆಯ ಈ ಭಾಗವನ್ನು ಬಹಳ ಪ್ರಯಾಸದಿಂದ ದಾಟಿ ಸುರಕ್ಷಿತ ಜಾಗಕ್ಕೆ ಬಂದು ಸೇರಿದೆವು. ಆಗ ನಮಗೆ ಮೋಕ್ಷವೇ ದೊರೆತಂತೆ ಭಾಸವಾಯಿತು.

ಇಲ್ಲಿನ ಜಾರುವಿಕೆ ನನಗೆ ನನ್ನ ಕೇದಾರಬದರಿ ಯಾತ್ರೆಯ ಒಂದು ಘಟನೆಯನ್ನು ಜ್ಞಾಪಕಕ್ಕೆ ತಂದಿತು ನಾನು ೧೯೪೩ ನೆ ಇಸವಿಯಲ್ಲಿ ಕೇದಾರಬದರಿ ಯಾತ್ರೆಗೆ ಹೋಗಿದ್ದೆ. ಕೇದಾರದಲ್ಲಿ ಕೇದಾರನಾಥನ ದರ್ಶನ ಮುಗಿಸಿ ಬದರಿಗೆ ಬರಲು ಸಿದ್ಧನಾಗಿ ಒಂದು ದಿನ ಬೆಳಗಿನ ಎಂಟು ಘಂಟೆ ಸಮಯಕ್ಕೆ ನಾನು ಕೇದಾರದಲ್ಲಿ ತಂಗಿದ್ದ ಒಬ್ಬ ಪಂಡನ ಮನೆಯಿಂದ ಹೊರಟೆ. ಆತನ ಮನೆಯಿಂದ ಮಂದಾಕಿನೀನದಿಯ ಸೇತುವೆಯವರೆಗೆ ಒಂದೇ ಸಮ ಒಂದು ನೂರಡಿ ಇಳಿಜಾರು. ಹಿಂದಿನ ದಿನಗಳೆಲ್ಲಾ ಅಲ್ಲಿ ಹತ್ತಿ ಇಳಿದು ಮಾಡಿದ್ದೆ. ಆದ್ದರಿಂದ ನಿಸ್ಸಂದೇಹದಿಂದ ಅಂದೂ ಆ ಇಳಿಜಾರಿನಲ್ಲಿ ಕಾಲಿಟ್ಟೆ. ಕಾಲಿಗೆ ಕ್ಯಾನ್ವಾಸ್ ಷೂ ಬೇರೆ ಹಾಕಿಕೊಂಡಿದ್ದೆ. ಕಾಲಿಡುವುದೇ ತಡ ಎರಡು ಪಾದಗಳೂ " ಸರ್‍ರ್ " ಅಂತ ಜಾರಿಹೋಗಲು ಶುರುವಾದುವು. ಭಾವಿಸಿದೆ: " ಮುಗಿಯಿತು ನನ್ನ ಆಟ." ಆ ರೀತಿಯಾಗಿ ಇಪ್ಪತ್ತು ಅಡಿ ಜಾರಿಹೋಗುವುದರಲ್ಲಿ ರಸ್ತೆಯ ಮಣ್ಣು ಜಾರಿಹೋಗದೆ ಇರಲಿ ಎಂಬುದಾಗಿ ರಸ್ತೆಗೆ ಅಡ್ಡಲಾಗಿ ಹಾಕಿದ್ದ ಕಲ್ಲಿಗೆ ಹೋಗಿ ನನ್ನ ಪಾದಗಳು ಸಿಕ್ಕಿಕೊಂಡುವು. ಅಷ್ಟು ಜೋರಾಗಿ ಜಾರಿಹೋಗುತ್ತಿದ್ದ ಶರೀರ ಯಾವ ರೀತಿಯಾಗಿ ಅಲ್ಲಿ ಮುಗ್ಗರಿಸಿಬೀಳದೆ ನೇರವಾಗಿ ನಿಂತುಕೊಂಡಿತೊ ನಾನು ಹೇಳಲಾರೆ. ಅಂತೂ ಶರೀರ ಅಲ್ಲಿಗೆ

ಹೋಗಿ ನೆಟ್ಟಗೆ ನಿಂತುಕೊಂಡಿತು. ಸ್ವಲ್ಪ ಹೆಚ್ಚು ಸಮಯವೇ ಹಿಡಿಯಿತು ಮೈ ತಿಳಿಯಲು. ಎದೆ "ಡಬ ಡಬ" ಅಂತ ಹೊಡೆದುಕೊಳ್ಳುತ್ತಿತ್ತು. ಕಣ್ಣು, ದೃಷ್ಟಿಯೇ ಇಲ್ಲದ ದೃಷ್ಟಿಯನ್ನು ನೋಡುತ್ತಿತ್ತು. ಚೇತರಿಸಿ ಕೊಂಡು ಮತ್ತೆ ಮೇಲಕ್ಕೆ ಹತ್ತಿಹೊರಟುಹೋಗೋಣ ಎಂದು ಕಾಲು ಹಾಕಿನೋಡುತ್ತೇನೆ, ಹತ್ತುವುದಕ್ಕೂ ಆಗುತ್ತಿಲ್ಲ. ಮತ್ತೆ ಮತ್ತೆ ಕಾಲು ಜಾರಿ ಕೆಳಕ್ಕೆ ಬರುತ್ತಿದೆ. ಕೆಳಕ್ಕೆ ಇಳಿಯುವ ಹಾಗಿಲ್ಲ ಮೇಲಕ್ಕೆ ಹತ್ತುವ ಹಾಗಿಲ್ಲ. ನನ್ನ ಕಷ್ಟ ಹೇಳಿಕೊಳ್ಳಲು ಬೇರೆ ಯಾವ ನರಪ್ರಾಣಿಯೂ ಹತ್ತಿರ ಇಲ್ಲ. ಆಗ ಯೋಚನೆಮಾಡಲಾರಂಭಿಸಿದೆ: "ಇಂದು ಈ ರಸ್ತೆ ನಿನ್ನೆ ಮೊನ್ನೆ ಇಲ್ಲದಿದ್ದದ್ದು ಜಾರಲು ಕಾರಣವೇನು?" ಕುಳಿತು ಆ ಪ್ರದೇಶವನ್ನು ಪರೀಕ್ಷೆಮಾಡಲಾರಂಭಿಸಿದೆ. ಆಗ ನೋಡುತ್ತೇನೆ ರಾತ್ರಿ ಬಿದ್ದ ಹಿಮ ಪಾರದರ್ಶಕ ಗಾಜಿನ ಹಾಗೆ ಭೂಮಿಯಮೇಲೆ ಕಟ್ಟಿಕೊಂಡಿದೆ. ಆದರೆ ನನ್ನ ಕಣ್ಣಿನ ಮಟ್ಟದಿಂದ ಅದು ಮಳೆಯಿಂದ ನೆನೆದ ಭೂಮಿಯ ಹಾಗೇ ಕಂಡಿತು. ಬಳಿಕ ಒಂದು ಉಪಾಯ ಹೊಳೆಯಿತು. ಸ್ವಲ್ಪ ಸ್ವಲ್ಪ ದೂರಕ್ಕೆ ಆ ರಸ್ತೆಯನ್ನು ನನ್ನ ಕೈಲಿದ್ದ ವಾಕಿಂಗ್ ಸ್ಟಿಕ್ಕಿನಿಂದ ಬಗೆದು ಬಗೆದು ಗೂಡಿನ ಹಾಗೆ ಗೂಡಿನ ಹಾಗೆ ಮಾಡಿಕೊಂಡು ಅವುಗಳಲ್ಲಿ ಕಾಲಿಟ್ಟು ಹತ್ತಿ ಹತ್ತಿ ಮೇಲಕ್ಕೆ ಬಂದುಬಿಟ್ಟೆ. ಬಳಿಕ ಹತ್ತು ಘಂಟೆ ಸಮಯಕ್ಕೆ ಜನರು ಬಂದು ಹೇಳಿದರು: "ನೀವು ಬದುಕಿದ್ದು ಭಗವಂತನ ಕೃಪೆಯಿಂದಲೇ. ರಾತ್ರಿವೇಳೆ ಹಿಮ ಬಿದ್ದ ದಿನ ಸೂರ್ಯೋದಯ ಆಗಿ ಹಿಮವೆಲ್ಲ ಚೆನ್ನಾಗಿ ರಸ್ತೆಯಲ್ಲಿ ಕರಗಿಹೋಗುವವರೆಗೆ, ವಿಶೇಷತಃ ಇಳಿಜಾರು ಜಾಗಗಳಲ್ಲಿ ಕಾಲೇ ಹಾಕಕೂಡದು. ನಿಮ್ಮ ತಂದೆ ತಾಯಿಗಳು ಬಹಳ ಪುಣ್ಯಮಾಡಿರಬೇಕು. ನೀವು ಜಾರಿಹೋಗಿದ್ದ ಸ್ಥಳ ನೋಡಿದರೆ ನಮ್ಮ ಮೈಯೆಲ್ಲಾ 'ಜುಮ್' ಅನ್ನುತ್ತಿದೆ!"

ಈ ನಿರ್‌ಜಾನ್ ಎಂಬ ಪ್ರಪಾತದ ಹತ್ತಿರ ಜಾರುತ್ತಿದ್ದ ಸ್ಥಳದಿಂದ ಮುಂದಕ್ಕೆ ಹೋಗುವಾಗಲೂ ಅಲ್ಲಲ್ಲಿ ಬೆಟ್ಟದ ಮೇಲಿನಿಂದ ಝರಿಗಳು ರಸ್ತೆ ಮೇಲೆ ಬೀಳುತ್ತಿದ್ದುವು. ಒಂದೊಂದು ಜಾಗದಲ್ಲಿ ಪುಣ್ಯಾವರ್ಚನೆ, ಒಂದೊಂದು ಜಾಗದಲ್ಲಿ ಸ್ನಾನ ಇವೇ ಮೊದಲಾದ ಶುದ್ಧೀಕರಣ ತಾನು ತಾನಾಗೇ ನಡೆಯಿತು.

ಹೇಗೋ ಮಾಡಿ ಬಹಳ ಪ್ರಯಾಸಪಟ್ಟು ಇಂದು ನಾವು ಜಿಪ್ತಿಯನ್ನು ತಲುಪಿದೆವು. ಹೋಗಲಿ, ಅಲ್ಲಿ ಏನಾದರು ಇಳಿದುಕೊಳ್ಳಲು ಒಳ್ಳೆ

ಜಾಗವಿತ್ತೆ? ಕೇಳಲೇಬೇಡಿ. ಯಾತ್ರಿಕರು ಇಳಿದುಕೊಳ್ಳುವ ಒಂದು ಮನೆ ಸುಮ್ಮನೆ ಸೋರುತ್ತಿತ್ತು. ನೆಲವೊ ಬರಿಯ ಮಣ್ಣಿನ ರಾಶಿ. ಸಾಲದುದಕ್ಕೆ ಅದರ ಮೇಲೆ ಆಡುಕುರಿಗಳ ಹಿಕ್ಕೆಯ ಹೊದ್ದಿಕೆ. ಆ ಹಿಕ್ಕೆ ಕೊಳೆತು ಅಂಥಾ ಸುವಾಸನೆ ಕೊಡುತ್ತಿತ್ತು. ಒಂದು ಮಣ ಮೈಸೂರು ಸ್ಪೆಷಲ್ ಗಂಧದಕಡ್ಡಿ ಹಚ್ಚಿದರೂ ಅದು ನಾನು ಜಗ್ಗೆನು ಎನ್ನುತ್ತಿತ್ತು. ನಮ್ಮ ಕೂಲಿಯಾಳುಗಳು ಬೇರೆ ವಿಧಿಯಿಲ್ಲದೆ ಆ ಜಾಗವನ್ನೇ ಸ್ವಲ್ಪ ಚೊಕ್ಕಟಮಾಡಿ ಅಡಿಗೆ ಮಾಡಲು ಶುರುಮಾಡಿದರು. ಈ ಮನೆ ಹತ್ತಿರವೆ ಎರಡು ಗುಡಿಸಲು ಇದ್ದುವು. ಅವು ಪೋಸ್ಟಲ್ ರನ್ನರುಗಳ ಗುಡಿಸಲು. ಕೃಪೆಮಾಡಿ ಅವರು ಒಂದನ್ನು ನಮಗೆ ಬಿಟ್ಟುಕೊಟ್ಟರು. ಅದೂ ಒಂದು ಕಿಂಚಿತ್ ನೆನೆಯುತ್ತಿತ್ತು. ಆದರೆ ಆ ಸಂದರ್ಭದಲ್ಲಿ ಅದು ನಮಗೆ ಅರಮನೆಯಾಗೇ ಕಾಣಬರಲಾರಂಭಿಸಿತು.

ಇಂದಿನ ರಾತ್ರಿ ಇಲ್ಲಿ ವಿಪರೀತ ಚಳಿ. ಈ ಪ್ರದೇಶದ ಸುತ್ತಲೂ ಬಹಳ ಸುಂದರವಾದ ಬೆಟ್ಟಗಳಿವೆ. ಪಕ್ಕದಲ್ಲೇ ಹರಿಯುತ್ತಿರುವ ಕಾಳಿ ನದಿಯ ದೃಶ್ಯ ಬಹಳ ಮನೋಹರವಾಗಿದೆ.

## ಮಾಲ್ಪದಿಂದ ಗರ್ಭಿಯಾಂಗಿಗೆ

೭,೨೦೦ ಅಡಿ ಎತ್ತರದಿಂದ ೧೦,೫೦೦ ಅಡಿ ಎತ್ತರಕ್ಕೆ. ದೂರ ೧೪ ಮೈಲಿ.

ಪ್ರಯಾಣ ಪ್ರಾತಃಕಾಲ ೬ ರಿಂದ ಅಪರಾಹ್ಣ ೩ ರ ವರೆಗೆ.

ತಾ|| ೧೬-೬-'೫೧, ಶನಿವಾರ

ಇಂದಿನ ದಾರಿಯೂ ಬುಡಿಯದವರೆಗೆ ಬಹಳ ಅಪಾಯಕರ ವಾದ್ದೇ. ಹನ್ನೊಂದು ಘಂಟೆ ಸಮಯಕ್ಕೆ ಬುಡಿಯವನ್ನು ತಲುಪಿದೆವು. ಈ ಹಳ್ಳಿಯ ಸುತ್ತಲೂ ಬೆಟ್ಟಗಳ ಮೇಲಿನಿಂದ ಅನೇಕ ಝರಿಗಳು ಬೀಳುತ್ತಿವೆ. ಅವು ಈ ಪ್ರದೇಶಕ್ಕೆ ಒಳ್ಳೆ ಸೊಬಗನ್ನು ಕೊಟ್ಟಿವೆ. ಇಲ್ಲಿಂದ ಎರಡು ಮೈಲಿ ರಸ್ತೆಯ ಒಂದು ಕಡಿದಾದ ತಿಟ್ಟನ್ನು ಹತ್ತಿ ಒಂದು ಕಣಿವೆ ಯನ್ನು ದಾಟಿದೆವು. ಕಣಿವೆಯನ್ನು ದಾಟಿದ ಒಡನೆ ದಾರಿಯ ಎರಡು ಕಡೆಯೂ ಪುಟ್ಟ ಪುಟ್ಟ ಹೂವಿನ ಗಿಡಗಳು ಹಾಸಿಗೆಯೋಪಾದಿಯಲ್ಲಿ ಬೆಳೆದು ನಿಂತಿದ್ದುವು. ಆ ಹೂವುಗಳು ಎಂಥೆಂಥ ಬಣ್ಣದವು, ಎಂಥೆಂಥ ಆಕಾರದವು ಏನು ಕತೆ! ಬಹಳ ಮನೋಹರವಾಗಿ ಕಂಡವು. ಅಷ್ಟು ಪ್ರಯಾಸಪಟ್ಟು ಆ ಕಡಿದಾದ ತಿಟ್ಟನ್ನು ಹತ್ತಿ ಬಂದುದಕ್ಕೆ ಒಳ್ಳೆ ಪ್ರತಿಫಲ ದೊರೆತಂತಾಯಿತು, ಕಣ್ಣಿಗೆ ಒಳ್ಳೆ ಹಬ್ಬದೂಟ.

ಇಲ್ಲಿಂದ ಗರ್ಭಿಯಾಂಗಿಗೆ ಎರಡು ಮೈಲಿ ದೂರ. ರಸ್ತೆ ಒಳ್ಳೆ ಮಟ್ಟವಾಗಿದೆ. ಇಕ್ಕೆಲಗಳ ಪರ್ವತ ಶ್ರೇಣಿಗಳು ಬಹಳ ಸುಂದರವಾಗಿವೆ. ಹಿಮಾವೃತ ಬೆಟ್ಟಗಳು ಆಗಾಗ ಈ ಪರ್ವತ ಶಿಖರಗಳ ಮಧ್ಯೆ ಮಧ್ಯೆ ಇಣಿಕಿ ಇಣಿಕಿ ನೋಡಲಾರಂಭಿಸಿದುವು. ದೂರದಲ್ಲಿ ನೇರವಾಗಿ ನಮ್ಮ ಕಣ್ಣಿನ ಮುಂದೆ ಬಹಳ ಎತ್ತರವಾಗಿರುವ ಹಿಮಾವೃತ ಪರ್ವತ ಶ್ರೇಣಿಯೊಂದು ಕಾಣಿಸಿಕೊಂಡಿತು. ಅದರಲ್ಲಿ ಹಿಮ ಬಹಳ ದಟ್ಟವಾಗಿ ಕವಿದಿದ್ದರಿಂದ ಅದು ಬೆಳ್ಳಿಯ ತಗಡಿನೋಪಾದಿಯಲ್ಲಿ ಸುಮ್ಮನೆ ಹೊಳೆಯುತ್ತಿತ್ತು. ಜನ ಹೇಳಿದರು: "ಲಿಪುಲೇಖ್ ಕಣಿವೆ ಎಂಬುದು ಅದೇನೆ. ಹಿಮ ಈ ವರ್ಷ ಅಲ್ಲಿ ಇನ್ನೂ ಕರಗಿಲ್ಲ. ಒಂದು ಹತ್ತು ಹದಿನೈದು ದಿನವಾದರೂ ನೀವು ಗರ್ಭಿಯಾಂಗಿನಲ್ಲೇ ಉಳಿಯಬೇಕಾಗಿಬರಬಹುದು." ಅಪರಾಹ್ಣ ಎರಡು ಘಂಟೆಗೆ ಶುರುವಾದ ಮಳೆ ಸಾಯಂಕಾಲ ಐದು ಘಂಟೆವರೆಗೂ ಸುರಿಯಿತು. ನಾವು ಊರನ್ನು ದಾಟಿ, ಅದರಿಂದಾಚೆಗೆ ಒಂದು ಫರ್ಲಾಂಗು ದೂರದಲ್ಲಿದ್ದ ಪ್ರವಾಸಿ ಮಂದಿರದಲ್ಲಿ ಇಳಿದುಕೊಂಡೆವು.

ಈ ಊರನ್ನು ಸಮೀಪಿಸುವವರೆಗೆ ಎಲ್ಲಾ ಮನೋಹರವಾಗಿ ತೋರಿತು. ಆದರೆ ಊರಿಗೆ ಕಾಲು ಹಾಕಿ ನೋಡುತ್ತೇವೆ, ಅದು ಬಹಳ ಕೊಳಕು ಊರು. ಮಳೆ ಬಂದರಂತೂ ರಸ್ತೆಗಳೆಲ್ಲಾ ಬಗ್ಗಡದಿಂದ ಕೂಡಿ ಕಾಲಿಡಲಾಗುವುದಿಲ್ಲ. ಸುಮ್ಮನೆ ಜಾರುತ್ತಿರುತ್ತವೆ. ಇಳಿಜಾರು ಪ್ರದೇಶಗಳಲ್ಲಂತೂ ಜಾರಿಬೀಳದಿರುವುದು ಎಂದಿಗೂ ಆಗದ ಮಾತು. ಊರು ಬಹಳ ಒಳ್ಳೆ ಪ್ರಕೃತಿಸೌಂದರ್ಯದ ಮಧ್ಯೆ ಇದ್ದರೂ ಜನ ಮಾತ್ರ ಅದನ್ನು ಬಹಳ ದುಸ್ಥಿತಿಯಲ್ಲಿ ಇಟ್ಟಿದ್ದಾರೆ. ಇದೇ ಭಾರತದ ಗಡಿಯ ಕಟ್ಟಕಡೆಯ ಒಂದು ಪುಟ್ಟ ವ್ಯಾಪಾರ ಸ್ಥಳ. ಇಲ್ಲಿಂದಾಚೆಗೆ ಟಿಬೆಟ್ಟಿನ ತಾಕ್ಲಕೋಟೆ ಎಂಬ ಪಟ್ಟಣವನ್ನು ಮುಟ್ಟುವವರೆಗೆ ಊರು–ಗೀರು, ಹಳ್ಳಿ–ಗಿಳ್ಳಿ ಯಾವೂ ಸಿಕ್ಕುವುದಿಲ್ಲ.

ನಾನು ಹಿಂದೆಯೇ ತಿಳಿಸಿದೇನೆ ಒಂದು ಆಂಧ್ರರ ಗುಂಪು ನಾನು ಆಲ್ಮೋರವನ್ನು ತಲುಪುವ ಮುನ್ನವೇ ಕೈಲಾಸದ ಕಡೆ ಮುಂದುವರಿದಿತ್ತು ಎಂಬುದಾಗಿ. ಅವರು ಗರ್ಭಿಯಾಂಗಿಗೆ ಬಂದು ಆಗಲೇ ಇಪ್ಪತ್ತು ದಿನಗಳ ಮೇಲೆ ಆಗಿಬಿಟ್ಟಿತ್ತು. ಅವರೂ, ಅವರನಂತರ ಇಲ್ಲಿಗೆ ಬಂದ ಇಬ್ಬರು ಬಂಗಾಳಿ ಯುವಕರೂ, ಲಿಪುಲೇಖ್ ಕಣಿವೆಯ ಹಿಮ ಕರಗುವಿಕೆಗಾಗಿ ಕಾದಿದ್ದರು. ನಾನು ಒಮ್ಮೆ ಅವರು ಇಳಿದುಕೊಂಡಿದ್ದ ಸ್ಥಳಕ್ಕೆ

ಹೋದೆ. ನೋಡುತ್ತೇನೆ ಅವರೆಲ್ಲರೂ, ವಿಶೇಷತಃ ಆಂಧ್ರರ ಗುಂಪಿನವರು ಬಹಳ ಹತಾಶರಾಗಿಬಿಟ್ಟಿದಾರೆ. ತಂದಿದ್ದ ದುಡ್ಡೆಲ್ಲಾ ಖರ್ಚಾಗಿಹೋಗಿ ಹಿಂದಿರುಗಬೇಕಾಗುವ ಸ್ಥಿತಿಯಲ್ಲಿದಾರೆ. ಅದನ್ನು ನೋಡಿ ಅವರೆಲ್ಲರಿಗೂ ಸ್ವಲ್ಪ ಧೈರ್ಯಕೊಟ್ಟು ಅವರಿಗೆ ಬೇಕಾಗಿದ್ದ ಕೆಲವು ಸಲಹೆಗಳನ್ನು ಇತ್ತು ಹಿಂದಿರುಗಿಬಂದೆ.

ನಾವೂ ಗಂರ್ಭಿಯಾಂಗಿನಲ್ಲಿ ಹತ್ತು ದಿನ ಉಳಿಯಬೇಕಾಗಿಬಂತು. ಆ ಹತ್ತು ದಿನವನ್ನೂ ಲಿಪುಲೇಖಿನ ಹಿಮ ಎಂದು ಕರಗುವುದೊ ಎಂಬ ಚಿಂತನೆಯಲ್ಲೇ ಕಳೆದೆವು. ನಾವು ಗರ್ಭಿಯಾಂಗನ್ನು ತಲುಪಿದ ಮಾರನೆ ದಿನವೇ ಲಿಪುಲೇಖ್ ಕಣಿವೆಯ ಭಾಗ ಇನ್ನೂ ಅಧಿಕ ಹಿಮದಿಂದ ಕೂಡಿದ ಹಾಗೆ ಕಂಡುಬಂತು. ಅಲ್ಲಿನವರು ಹೇಳಿದರು: "ಬಹುಶಃ ನೀವು ಇಲ್ಲಿ ಇನ್ನೂ ಒಂದು ತಿಂಗಳ ಹತ್ತಿರ ಹತ್ತಿರ ಇರಬೇಕಾಗಿ ಬರಬಹುದು."

ನಮ್ಮ ಪಾರ್ಟಿ ಬಹಳ ದೊಡ್ಡದು. ದಿವಸ ದಿವಸದ ಊಟ ವೊದ ಲಾದುವುಗಳ ಖರ್ಚು ಪಾರ್ಟಿಯವರ ಮೂಲ ಧನವನ್ನೂ ಕರಗಿಸಲಾರಂ ಭಿಸಿತು. ಇದನ್ನು ನೋಡಿ ನಮ್ಮ ಪಾರ್ಟಿಯವರಿಗೆ ಸ್ವಲ್ಪ ಭಯವೇ ಆಯಿತು. ಈ ಭಯ ಒಂದೇ ಅಲ್ಲ, ನಾವು ಇಲ್ಲಿ ಹೀಗೇ ಕಾಲ ಕಳೆದಂತೆಲ್ಲ ನಾವು ಹಿಂದಿರುಗುವಾಗ ದಾರಿಯಲ್ಲಿ ಮುಂಗಾರು ಮಳೆಗೆ ಸಿಕ್ಕಿಕೊಳ್ಳ ಬೇಕಾಗಿ ಬರುತ್ತದೆಯಲ್ಲ ಎಂಬ ಹೆದರಿಕೆ ಬೇರೆ ಹೃದಯವನ್ನು ಪ್ರವೇಶಿಸ ಲಾರಂಭಿಸಿತು. ಆ ಮಳೆಯ ಹೊಡೆತಕ್ಕೆ ರಸ್ತೆಗಳು ಅಲ್ಲಲ್ಲಿ ಕುಸಿದು ಬೀಳುವ ಸಂಭವ. ಮತ್ತೆ ಮುಖ್ಯ ರಸ್ತೆಗೆ ಬರಬೇಕಾದರೆ ಬಹಳ ಪ್ರಯಾಸಪಡಬೇಕಾಗುತ್ತದೆ. ಈ ಪ್ರಯಾಸಗಳ ಜೊತೆಗೆ ಆ ಬಿರುಸಿನ ಮಳೆಯಲ್ಲಿ ಪ್ರಯಾಣಮಾಡುವುದು ಎಂದರೆ ವರ್ಣಿಸಲಾಗದ ಕಷ್ಟಪರಂಪರೆ ಗಳಿಗೆ ಈಡಾಗಬೇಕಾಗಿ ಬರುತ್ತದೆ. ಇವುಗಳೆಲ್ಲಕ್ಕಿಂತ ಅಧಿಕವಾದ್ದು ಆ ಮುಂಗಾರು ಮಳೆಯಲ್ಲಿ ಗರ್ಭಿಯಾಂಗಿನಿಂದ ಜಿಪ್ತಿಗೆ ಹಿಂದಿರುಗಿ ಬರಬೇಕಾದರೆ ಪ್ರಾಣವನ್ನೇ ಕೈಯಲ್ಲಿ ಹಿಡಿದುಕೊಂಡು ನಡೆಯಬೇಕಾಗಿ ರುವ ಭಯ. ಇವುಗಳೆಲ್ಲಾ ನಮ್ಮ ಪಾರ್ಟಿಯವರಿಗೆ ಹೃದಯಕಂಪನ ವನ್ನು ತಂದುವು.

ಅವರು ಭಾವಿಸಲಾರಂಭಿಸಿದರು: "ಈ ಊರಿನಲ್ಲಿ ನಮ್ಮನ್ನು ಹೆಚ್ಚುದಿವಸ ಕೊಳೆಹಾಕಿದ್ದೇ ಆದರೆ ತಮ್ಮ ಸರಕು ಹೆಚ್ಚು ಹೆಚ್ಚಾಗಿ ಖರ್ಚಾಗಿ ತಮಗೆ ಫಾಯಿದೆ ಆಗುವುದೆಂದು ಈ ಊರಿನವರು ಹೀಗೆ ಮಾಡುತ್ತಿರಬಹುದು" ಎಂಬುದಾಗಿ. ಅದಕ್ಕಾಗಿ ನಮ್ಮ ಪಾರ್ಟಿಯವರು ತಾವು ಡಾರ್ಜಲಿಂಗಿನಿಂದ ಕರೆತಂದಿದ್ದ ನೇಪಾಳಿ ಕೂಲಿಗಳಲ್ಲಿ ಬಲಾಢ್ಯರಾದ ಇಬ್ಬರನ್ನು ಲಿಪುಲೇಖ್ ಕಣಿವೆಯ ಹತ್ತಿರಕ್ಕೆ ಕಳುಹಿಸಿದರು. ಅವರು ಆ ಸ್ಥಳವನ್ನೆಲ್ಲಾ ಚೆನ್ನಾಗಿ ಪರೀಕ್ಷಿಸಿ ನೋಡಿ ಹಿಂದಿರುಗಿಬಂದು ಹೇಳಿದರು: "ಈ ಊರಿನವರು ಹೇಳುವುದರಲ್ಲಿ ಸ್ವಲ್ಪ ಸತ್ಯಾಂಶವಿದೆ. ಈಗ ಅಲ್ಲಿ ದಾಟಲಸಾಧ್ಯವಾದಷ್ಟು ಹಿಮ ಬಿದ್ದಿದೆ. ನಾವು ಇಲ್ಲಿ ಕನಿಷ್ಠಪಕ್ಷ ಇನ್ನೂ ಒಂದು ಮೂರು ನಾಲ್ಕು ದಿನವಾದರೂ ಕಾಯಬೇಕಾಗಿಬರಬಹುದು."

ಅವರು ಹಿಂದಿರುಗಿದ ದಿನವೇ ಮತ್ತೆ ಲಿಪುಲೇಖ್ ಕಣಿವೆಯ ಮೇಲೆ ಹೇರಳವಾಗಿ ಹಿಮ ಬಿದ್ದಿರುವುದನ್ನು ಮಾರನೆ ದಿನ ಇಲ್ಲಿಂದಲೇ ನಾವು ಚೆನ್ನಾಗಿ ನೋಡಬಹುದಾಗಿತ್ತು. ಆಗಲಂತೂ ನಮ್ಮ ಪಾರ್ಟಿಯವರ ಹೃದಯ ಸುಮ್ಮನೆ ಒಡೆದೇ ಹೋಯಿತು. ನಮ್ಮಲ್ಲಿ ಒಬ್ಬರಂತೂ ಹಿಂದಿರುಗಲು ಸಿದ್ಧರಾಗೇ ಬಿಟ್ಟರು. ನಮ್ಮ ಪಾರ್ಟಿಯ ಮುಖಂಡರು ನನಗೆ ಹೇಳಿದರು: "ಸ್ವಾಮಿಜಿ, ನಾವು ಇಲ್ಲಿ ಇನ್ನೆಷ್ಟು ದಿನ ಇರಬೇಕೊ ತಿಳಿಯದು. ದಿನದಿನದ ಖರ್ಚು ನಮ್ಮ ಮಿತಿಯನ್ನು ಮೀರಿಹೋಗುತ್ತಿದೆ. ನಮಗೆ ಕೈಲಾಸಪತಿ ತನ್ನ ದರ್ಶನ ಕೊಡಲು ಇಚ್ಛಿಸದಿರುವಂತೆ ಕಾಣುತ್ತಿದೆ. ಹಿಂದಿರುಗಿ ಹೊರಟುಹೋಗೋಣ ಅಂತ ಯೋಚಿಸುತ್ತಿದ್ದೇವೆ. ತಮ್ಮ ಅಭಿಪ್ರಾಯವೇನು?" ನಾನು ಹೇಳಿದೆ: "ನಾನಂತೂ ಕೈಲಾಸಪತಿಯ ದರ್ಶನ ಮಾಡದೆ ಹಿಂದಿರುಗುವುದಿಲ್ಲ. ಈ ಪ್ರಯತ್ನದಲ್ಲಿ ಮಡಿಯಬೇಕಾಗಿ ಬಂದರೂ ನಾನು ಕಿಂಚಿತ್ತೂ ಹೆದರುವುದಿಲ್ಲ. ನಾವು ಸನ್ಯಾಸಿಗಳು. ಸತ್ತರೂ ನಮಗಾಗಿ ಅಳುವವರು ಈ ಜಗತ್ತಿನಲ್ಲಿ ಯಾರೂ ಇಲ್ಲ. ಈ ಪ್ರಪಂಚವೇ ತಲೆಕೆಳಕಾದರೂ ನನ್ನ ಗುರಿಯನ್ನು ಮುಟ್ಟದೆ ನಾನು ಹಿಂದಿರುಗುವುದಿಲ್ಲ. ದಯವಿಟ್ಟು ನೀವು ಇನ್ನೂ ಒಂದುವಾರ ನೋಡಿ, ಬಳಿಕ ಯಾವುದಾದರೊಂದು ನಿರ್ಧಾರಕ್ಕೆ ಬರುವಿರಂತೆ." ಆಗ ಅವರು ಹೇಳಿದರು: "ನಿಮ್ಮ ದೃಢಸಂಕಲ್ಪ ನೋಡಿ ನನ್ನ ಹೃದಯದಲ್ಲಿ ಧೈರ್ಯ ಹುಟ್ಟಲಾರಂಭಿಸಿದೆ, ಬಹುಶಃ ನಿಮ್ಮ ಈ ಸತ್ಯಸಂಕಲ್ಪದಿಂದ

ನಮಗೂ ಕೈಲಾಸಪತಿಯ ದರ್ಶನ ದೊರೆತರೂ ದೊರೆಯಬಹುದು. ನೀವು ಹೇಳಿದ ಹಾಗೇ ಇನ್ನೂ ಒಂದುವಾರ ನೋಡಿ ಯಾವುದಾದರೂ ಒಂದು ನಿರ್ಧಾರಕ್ಕೆ ಬರುತ್ತೇವೆ. ಅಷ್ಟರಲ್ಲೇ ಈ ಲಿಪುಲೇಖ್ ಕಣಿವೆಯ ಹಿಮ ಕರಗಿ ನಮಗೆ ದಾರಿ ಸುಗಮವಾಗಲೆಂದು ನೀವೂ ಕೈಲಾಸಪತಿಗೆ ಪ್ರಾರ್ಥನೆ ಮಾಡಿ. ಬಹುಶಃ ನಿಮ್ಮ ಪ್ರಾರ್ಥನೆ ಆತನ ಕಿವಿಯನ್ನು ಮುಟ್ಟಿದರೂ ಮುಟ್ಟಬಹುದು."

ಈ ಮಾತುಕತೆಗಳಾದ ಮಾರನೆ ದಿನವೇ ಒಬ್ಬರು ಬಂದು ಹೇಳಿದರು: "ತಾಕ್ಲಕೋಟೆಯಿಂದ ಹೊರಟ ಒಂದು ಚಮರೀಮೃಗ ಲಿಪುಲೇಖ್ ಕಣಿವೆ ದಾಟಿ ಇಂದು ಇಲ್ಲಿಗೆ ಬಂದಿದೆ" ಎಂಬುದಾಗಿ. ಆಗ ನಮ್ಮ ಹೃದಯುಗಳಲ್ಲೆಲ್ಲಾ ಆಶಾಕಿರಣ ಮೂಡಲಾರಂಭಿಸಿತು. ಎಲ್ಲರೂ ಕೈಲಾಸ ಪತಿಗೆ ವಂದನೆ ಅರ್ಪಿಸಿದೆವು. ಅನಂತರ ನಾನು ಕುತೂಹಲಪಟ್ಟು ಆ ಚಮರೀಮೃಗವನ್ನು ನೋಡಲು ಹೋದೆ. ಅದೊಂದು ಬಹಳ ಬಲಯುತವಾದ ಸಾಧು ಪ್ರಾಣಿ. ಕೊರಳಿಗೆ ಗೊಂಡೆ ಕಟ್ಟಿದ್ದರು. ಬೆನ್ನಿನ ಮೇಲೆ ಸುಂದರವಾದ ಜೀನು ಹಾಕಿದ್ದರು. ಮೈ ತುಂಬ ಉದ್ದವಾದ ಕಪ್ಪುಗೂದಲು ಬೆಳೆದಿತ್ತು. ಬಾಲದಲ್ಲಿ ಕಪ್ಪುಗೂದಲಿನ ಒಂದು ದೊಡ್ಡ ಗೊಂಡೆ ನೇತಾಡುತ್ತಿತ್ತು. ಹಸುವಿಗು ಎಮ್ಮೆಗು ಮಧ್ಯವರ್ತಿಯಾದ ಒಂದು ಪ್ರಾಣಿಯಂತೆ ಕಂಡಿತು. ಆಗ ನನಗನಿಸಿತು: "ಏನು ಸಮಾಚಾರ! ನಾವು ದೇವಾಲಯುಗಳಲ್ಲಿ ಉಪಯೋಗಿಸುವ ಚಾಮರ ಇದರ ಬಾಲದ ಗೊಂಡೆ ಅಂತ ಕೇಳಿದ್ದೆನಲ್ಲ. ಆದರೆ ಅದು ಬೆಳ್ಳಗಿದೆ, ಇದು ಕಪ್ಪಗಿದೆಯಲ್ಲ?" ಟಬೆಟ್ಟಗೆ ಹೋಗಿ ನೋಡಿದಾಗ ಬಿಳಿ ಗೊಂಡೆಗಳನ್ನುಳ್ಳ ಚಮರೀಮೃಗಗಳೂ ಕಣ್ಣಿಗೆ ಬಿದ್ದುವು. ಆಗ ಭಾವನೆ ಬಂತು: "ಬಹುಶಃ ಇಂಥ ಬಿಳಿ ಗೊಂಡೆಗಳನ್ನೇ ಭಾರತಕ್ಕೆ ರಫ್ತುಮಾಡುತ್ತಿರಬಹುದು."



೪

# ಗರ್ಭಿಯಾಂಗಿನಿಂದ ತಾಕ್ಲಕೋಟೆಗೆ

**ಪ್ರಯಾಣ ತಾ|| ೨೬-೬-೧೯೫೧ ರಿಂದ ೨೮-೬-೧೯೫೧ ರ ವರೆಗೆ.**
**ದೂರ ೨೯ ಮೈಲಿ.**

ನಾವು ನಮ್ಮ ಟಿಬೆಟ್ಟಿನ ಪ್ರವಾಸಕ್ಕೆ ಇಲ್ಲಿಂದಲೇ ಒಬ್ಬ ಗೈಡನ್ನು ಕರೆದುಕೊಂಡು ಹೋಗಬೇಕು. ಪ್ರಸ್ತುತಃ ಇಲ್ಲಿ ಒಳ್ಳೆ ಗೈಡುಗಳು ಎಂದು ಹೆಸರು ಗಳಿಸಿರುವವರು ಖೀಚ್‌ಕಂಪ ಮತ್ತು ರುಕುಮ್‌ಸಿಂಗ್. ಖೀಚ್ ಕಂಪ ಟಿಬೆಟ್ಟಿನ ನಿವಾಸಿ. ಬಹಳ ಒಳ್ಳೆ ಮನುಷ್ಯ. ಆದರೆ ಆತನನ್ನು ಆ ಆಂಧ್ರರ ಗುಂಪು ಮತ್ತು ಆ ಬಂಗಾಳಿ ಯುವಕರು ನೇಮಿಸಿಕೊಂಡು ಬಿಟ್ಟಿದ್ದರಿಂದ ಆತ ನಮಗೆ ದೊರೆಯಲಿಲ್ಲ. ನಾವು ರುಕುಮ್‌ಸಿಂಗನನ್ನು ನಮ್ಮ ಗೈಡನ್ನಾಗಿ ಮಾಡಿಕೊಂಡೆವು. ಈತ ಭಾರತದ ಗಿರಿವಾಸಿ (ಪಹಡಿ). ಈತನೂ ಒಳ್ಳೆಯವನೇ, ಆದರೆ ಸ್ವಲ್ಪ ಮಾತಾಳಿ. ಒಂದು ವಿಧದಲ್ಲಿ ಬೇಜಾರು ಕಳೆಯಲು ಇಂಥವರ ಆವಶ್ಯಕತೆಯೂ ಇದ್ದೇ ಇರುತ್ತದೆ.

ಇಲ್ಲಿಂದ ಹೊರಟು ಕೈಲಾಸ-ಮಾನಸಸರೋವರಗಳನ್ನು ದರ್ಶನ ಮಾಡಿ ಮತ್ತೆ ಇಲ್ಲಿಗೆ ಹಿಂದಿರುಗಿ ಬರಲು ಸುಮಾರು ಒಂದು ತಿಂಗಳು ಹಿಡಿಯುತ್ತದೆ. ಇಲ್ಲಿಂದಾಚೆಗೆ ತಾಕ್ಲಕೋಟೆಯನ್ನು ಬಿಟ್ಟರೆ ನಮಗೆ ಬೇರೆ ಯಾವ ಊರೂ ಸಿಕ್ಕದು. ಆದ್ದರಿಂದ ನಾವು ಇಲ್ಲಿಂದಲೇ ನಮಗೆ ಒಂದು ತಿಂಗಳಿಗೆ ಬೇಕಾಗಬಹುದಾದ ಆಹಾರಸಾಮಗ್ರಿ, ರಾತ್ರಿ ವೇಳೆ ತಂಗಲು ಡೇರಾ (ಟೆಂಟು), ಮತ್ತಿತರ ಆವಶ್ಯಕ ಸಾಮಾನು ಇವನ್ನು ತೆಗೆದುಕೊಂಡು ಹೋಗಬೇಕು.

ನಮ್ಮ ಮುಂದಿನ ಪ್ರಯಾಣಕ್ಕೆ ತಕ್ಕ ಸಿದ್ಧತೆ ಮಾಡಿಕೊಳ್ಳಲು ನಮಗೆ ಎರಡು ದಿನ ಹಿಡಿಯಿತು. ಇಲ್ಲಿಂದಾಚೆಗೆ ಅಧಿಕವಾಗಿ ಉಣ್ಣೆ ಬಟ್ಟೆಗಳನ್ನೇ ಉಪಯೋಗಿಸಬೇಕಾಗಿದ್ದುದರಿಂದ ನಮ್ಮ ಹತ್ತಿಯ ಉಡುಪಿನ ಬಹುಭಾಗ ಮತ್ತು ನಾವು ಗರ್ಭಿಯಾಂಗಿನಿಂದ ಆಲ್ಮೋರಕ್ಕೆ ಹಿಂದಿರುಗುವಾಗ ಬೇಕಾಗುವ ಕೆಲವು ಸಾಮಾನು ಇವನ್ನೆಲ್ಲಾ ಮೂಟೆ ಕಟ್ಟಿ ನಾನಾಗಲೆ ತಿಳಿಸಿರುವ ಮೋಹನ್‌ಸಿಂಗನ ಮನೆಯಲ್ಲಿ ಇಟ್ಟೆವು.

ಇದುವರೆಗೆ ನಾವು ಉಪಯೋಗಿಸಿದ ಸಾಮಾನು-ಕುದುರೆಗಳು ಸುಮಾರು ಎರಡು ಮಣದಷ್ಟು ಭಾರವನ್ನು ಮತ್ತು ಕೂಲಿಗಳು ಮೂವ ತ್ತೈದು ಪೌಂಡಿನಷ್ಟು ಭಾರವನ್ನು ಹೊರುತ್ತಿದ್ದರು. ಆದರೆ ಈ ಪ್ರದೇಶದ ಕುದುರೆಗಳು ಅಷ್ಟು ಬಲವಾಗಿ ಇಲ್ಲದಿರುವುದರಿಂದಲೂ, ಸಾಂದ್ರತೆ ಕಡಮೆ ಯಾಗಿರುವ ವಾಯುಗುಣದಲ್ಲಿ ಸಂಚರಿಸಬೇಕಾಗಿರುವುದರಿಂದಲೂ ಅವುಗಳಮೇಲೆ ಒಂದೂವರೆ ಮಣ ಭಾರವನ್ನು ಮಾತ್ರ ಹಾಕುತ್ತಾರೆ. ಕೂಲಿಗಳು ಇಪ್ಪತ್ತೆಂಟು ಪೌಂಡು ತೂಕವನ್ನು ಮಾತ್ರ ಹೊರುತ್ತಾರೆ. ನಮ್ಮ ಸಾಮಾನು ಹೊರಲು ಎಂಟು ಕುದುರೆಗಳನ್ನು, ಸವಾರಿಗಾಗಿ ಒಂಬತ್ತು ಕುದುರೆಗಳನ್ನು ಏರ್ಪಾಡು ಮಾಡಿದೆವು.

ನಾನು ಇಲ್ಲಿಯವರೆಗೆ ನಡೆದೇ ಬಂದೆ ಈಗ ನಮ್ಮ ಗೈಡು ನನಗೆ ಬುದ್ಧಿವಾದವಿತ್ತ : " ನೋಡಿ, ೧೬,೭೫೦ ಅಡಿ ಎತ್ತರವಿರುವ ಈ ಲಿಫು ಲೇಖ್ ಕಣಿವೆಯನ್ನು ದಾಟುವುದು ಬಹಳ ಬಹಳ ಕಷ್ಟ. ಇದನ್ನು ಯಾರು ಕಾಲು ನಡಗೆಯಿಂದಲೇ ದಾಟಿಬಿಡಬಲ್ಲರೊ ಅವರೇನೊ ಟಿಬೆಟ್ಟಿನ ಭಾಗದ ಪ್ರಯಾಣವನ್ನು ಸುರಕ್ಷಿತವಾಗಿ ಮಾಡಿ ಬರಬಲ್ಲರು. ಆದರೆ ಇಲ್ಲಿಂದ ತಾಕ್ಲಕೋಟೆಯವರೆಗೆ ಒಂದು ಖಾಲಿ ಸವಾರಿ ಕುದುರೆ ನಿಮ್ಮ ಜೊತೆಯಲ್ಲಿ ಬರುವುದು ಮೇಲು. ಯಾರಿಗೆ ತಾನೆ ಗೊತ್ತು ಯಾರ ಯಾರ ಕಾಯಕ ಶಕ್ತಿ ಎಷ್ಟೆಷ್ಟರ ಮಟ್ಟಿನದು ಎಂಬುದು? ಮಧ್ಯ ದಾರಿಯಲ್ಲಿ ಏನಾದರು ತೊಂದರೆ ಆಗಿಬಿಟ್ಟರೆ ಆಗ ನೀವು ಅದನ್ನು ಉಪಯೋಗಿಸಿ ಕೊಳ್ಳಬಹುದು." ಆತನ ಬುದ್ಧಿವಾದದಂತೆ ನನಗೂ ಒಂದು ಸವಾರಿ ಕುದುರೆ ಏರ್ಪಾಡು ಮಾಡಿಕೊಂಡೆ. ಆದರೆ ಭಗವಂತನ ಕೃಪೆಯಿಂದ ಅದನ್ನು ಉಪಯೋಗಿಸುವ ಪ್ರಮೇಯವೇ ಬರಲಿಲ್ಲ. ಅದು ಆನಂದದಿಂದ ನನ್ನ ಹಿಂದೆಯೇ ತಾಕ್ಲಕೋಟೆಯವರೆಗೆ ಸುಮ್ಮನೆ ಬಂತು. ನೋಡಿ ಆ ಕುದುರೆಯ ಅದೃಷ್ಟವನ್ನ !

## ಗರ್ಭಿಯಾಂಗಿನಿಂದ ಕಾಳಾಪಾನಿಗೆ

೧೦,೫೦೦ ಅಡಿ ಎತ್ತರದಿಂದ ೧೨,೦೦೦ ಅಡಿ ಎತ್ತರಕ್ಕೆ. ದೂರ ೧೧ ಮೈಲಿ.

ಪ್ರಯಾಣ ಬೆಳಗಿನ ೧೦–೪೫ ರಿಂದ ಸಾಯಂಕಾಲ ೫ ರ ವರೆಗೆ.

ತಾ|| ೨೬–೬'೫೧, ಮಂಗಳವಾರ.

ಇದುವರೆಗೆ ನಾವು ಕಾಳೀನದಿಯ ಬಲ ದಡದಲ್ಲೇ ಮುಂದುವರಿ ದೆವು. ಇಂದು ನಾವು ಕಾಳೀನದಿಯನ್ನು ದಾಟಿ ಅದರ ಎಡ ದಡದಲ್ಲಿ,

ಎಂದರೆ ನೇಪಾಳದಲ್ಲಿ ಸ್ವಲ್ಪ ದೂರ ಮುಂದುವರಿದು ಮತ್ತೆ ಅದೇ ನದಿಯನ್ನು ದಾಟಿ ಅದರ ಬಲ ದಡಕ್ಕೆ, ಎಂದರೆ ಭಾರತಕ್ಕೆ ಬಂದು ಅದರ ಮೂಲಪ್ರದೇಶವನ್ನು, ಎಂದರೆ "ಕಾಳಾಪಾನಿ" ಎಂಬ ಜಾಗವನ್ನು ಮುಟ್ಟಿದೆವು.

ಗರ್ಭಿಯಾಂಗಿನಿಂದ ಒಂದು ಮೈಲಿ ದೂರ ನಡೆದನಂತರ ಕಾಳೀ ನದಿಯ ಮೇಲೆ ಹಾಕಿರುವ ಮರದ ಸೇತುವೆ ಸಿಕ್ಕಿತು. ಅದನ್ನು ದಾಟಿ ನೇಪಾಳಕ್ಕೆ ಬಂದೆವು. ಅಲ್ಲಿ ಎದುರಿಗಿದ್ದ ಬೆಟ್ಟವೊಂದರಲ್ಲಿ ಹೇರಳವಾಗಿ ಭುಜಪತ್ರೆ ಮರಗಳು ಬೆಳೆದಿದ್ದವು. ಆ ಬೆಟ್ಟದಲ್ಲಿ ಕಸ್ತೂರಿ ಜಿಂಕೆಗಳು ಅಧಿಕವಾಗಿ ವಾಸವಾಗಿವೆಯಂತೆ. ಏಳೆಂಟು ಮೈಲಿ ದೂರ ಕಾಳೀನದಿಯ ಎಡ ದಡದಲ್ಲೇ ಮುಂದುವರಿದೆವು. ರಸ್ತೆ, ಮೈದಾನದ ರಸ್ತೆಯ ಹಾಗೆ ನೇರವಾಗೇ ಇತ್ತು. ನದಿಯ ಎರಡು ಕಡೆಗಳಲ್ಲೂ ಬೆಟ್ಟಗಳು ಗೋಡೆ ಯಂತೆ ಹಬ್ಬಿದ್ದುವು. ಪ್ರಕೃತಿ ಸೌಂದರ್ಯ ಬಹಳ ಮನೋಹರವಾಗಿತ್ತು. ಕೆಲವು ಬೆಟ್ಟಗಳ ತುದಿಯಲ್ಲಿ ಹಿಮವೂ ಕವಿದಿತ್ತು. ಕೆಲವು ಕಡೆ ಬಹಳ ಅಪಾಯಕರವಾದ ಹಳ್ಳಕೊಳ್ಳಗಳನ್ನೂ ದಾಟಬೇಕಾಗಿ ಬಂತು. ಇಂದೂ ಒಂದು ಕಡೆ ಹಾಸಿಗೆಯಂತೆ ಹಬ್ಬಿದ್ದ ಒಂದು ಹೂವಿನ ಮೈದಾನ ಸಿಕ್ಕಿತು. ಆ ಪ್ರದೇಶ ಬಹಳ ರಮ್ಯವಾಗಿ ತೋರಿತು. ಕೆಲವೆಡೆಗಳಲ್ಲಿ ಕಾಡು-ಗುಲಾಬಿ ಗಿಡ ಬಹಳವಾಗಿ ಹೂವು ಬಿಟ್ಟು ದಾರಿಗೆ ಸೊಗಸಾದ ಸುಗಂಧವನ್ನು ಹರಡುತ್ತಿದ್ದುವು. ಈ ಏಳೆಂಟು ಮೈಲಿಗಳನ್ನು ನಡೆದನಂತರ ಮತ್ತೆ ಒಂದು ಮರದ ಸೇತುವೆಯಿಂದ ಕಾಳೀನದಿ ದಾಟಿ ಭಾರತಕ್ಕೆ ಬಂದೆವು. ಬಳಿಕ ಕಲ್ಲು ಗುಂಡುಗಳಿಂದ ಕೂಡಿದ ರಸ್ತೆಯ ಮೂಲಕ ಹಾದು ಕಾಳಾ ಪಾನಿಯನ್ನು ಮುಟ್ಟಿದೆವು. ಕಾಳಾಪಾನಿಯೂ ಬಹಳ ಸುಂದರವಾದ ಜಾಗವೇ.

ನಮ್ಮ ಟೆಂಟಿನ ಜೀವನ ಇಂದಿನಿಂದಲೇ ಆರಂಭ. ನಮ್ಮ ಪಾರ್ಟಿ ಯವರಿಗೆ ಮೂರು ಟೆಂಟು, ಆಳುಕಾಳುಗಳಿಗೆ ನಾಲ್ಕು, ಅಡಿಗೆಗೆ ಒಂದು ಒಟ್ಟು ಎಂಟು ಟೆಂಟು ಹಾಕಿದೆವು. ಅನಂತರ ಕಾಳೀನದಿಯ ಮೂಲಕ್ಕೆ ಹೋಗಿ ನಮ್ಮ ಪಾರ್ಟಿಯವರು ಪೂಜೆ ಪುರಸ್ಕಾರಗಳನ್ನು ಮಾಡಿ ಬಂದರು.

## ಕಾಳಾಪಾನಿಯಿಂದ ಸಿಯಾಂಗ್ಛಮ್ಮಿಗೆ

**೧೨,೦೦೦ ಅಡಿ ಎತ್ತರದಿಂದ ೧೫,೦೦೦ ಅಡಿ ಎತ್ತರಕ್ಕೆ. ದೂರ ೬ ಮೈಲಿ.**

**ಪ್ರಯಾಣ ಬೆಳಗಿನ ೯–೫ ರಿಂದ ಅಪರಾಹ್ಣ ೨ ರ ವರೆಗೆ.**

**ತಾ|| ೨೭-೬ '೫೧, ಬುಧವಾರ.**

ಇಂದಿನ ದಾರಿಯ ಉದ್ದಕ್ಕೂ ಬಹಳ ಬಹಳ ಸುಂದರ ಸುಂದರವಾದ ದೃಶ್ಯಗಳು. ಒಂದು ಕಡೆ ನಮ್ಮ ದಾರಿಯ ಬಲ ಭಾಗದಲ್ಲಿ ಒಂದು ವಿಸ್ತಾರವಾದ ಕಣಿವೆ ಕಾಣಿಸಿಕೊಂಡಿತು. ಅದರ ಎರಡು ಕಡೆಯೂ ಬುಡದಿಂದ ತುದಿಯವರೆಗೆ ಹಿಮದಿಂದ ಆವೃತವಾದ ಬೆಟ್ಟಗಳು ಗೋಡೆಯಂತೆ ಎದ್ದು ನಿಂತಿದ್ದುವು. ಅವುಗಳಿಂದ ಹೊರಟ ಹಿಮಪ್ರವಾಹ ಆ ಕಣಿವೆಯ ಒಳಕ್ಕೆ ಹರಿದು ಬಳಿಕ ನೀರಾಗಿ ಪರಿವರ್ತನೆ ಹೊಂದಿ ನದಿಯ ರೂಪ ತಾಳಿ ಹೊರಬರುತ್ತಿತ್ತು. ಸೂರ್ಯನ ರಶ್ಮಿ ಬೆಟ್ಟ, ಹಿಮ, ಹಿಮ ಪ್ರವಾಹ, ನದಿ ಇವುಗಳ ಮೇಲೆಲ್ಲಾ ಬಿದ್ದು ಸುಮ್ಮನೆ ಹೊಳೆಯುತ್ತ ನಲಿದಾಡುತ್ತಿತ್ತು. ನನಗಂತೂ ಆ ದೃಶ್ಯ ಒಹಳ ಮನೋಹರವಾಗಿ ಕಂಡಿತು. ಅದನ್ನು ನೋಡುತ್ತಲೇ ಬಹಳ ಹೊತ್ತು ನಿಂತಿದ್ದೆ. ಇಲ್ಲಿಂದಾಚೆಗೆ ಮುಂದು ಮುಂದುವರಿದಂತೆಲ್ಲ, ಚಳಿಯೂ ಹೆಚ್ಚು ಹೆಚ್ಚಾಗಲಾರಂಭಿಸಿತು. ಹಾಗೇ ಇನ್ನೂ ಸ್ವಲ್ಪ ದೂರ ಮುಂದುವರಿದನಂತರ ನಮ್ಮ ಎಡ ದಿಕ್ಕಿನಿಂದ "ಧಡೀರ್" ಎಂಬ ಶಬ್ದ ಕೇಳಿಸಿತು. ತಿರುಗಿ ನೋಡುತ್ತೇವೆ ಒಂದು ಹಿಮಾವೃತ ಶಿಖರದಿಂದ ಒಂದು ಹಿಮುಗಲ್ಲು (ಅವಲಾನ್ಷ್) ಕೆಳಕ್ಕೆ ಬಿದ್ದು ನುಚ್ಚು ನೂರಾಗುತ್ತಿದೆ. ಆ ದೃಶ್ಯ ನಮ್ಮ ಕಣ್ಣಿಗೇನೊ ಹಬ್ಬದೂಟ ಮಾಡಿಸಿತು. ಆದರೆ ನಾವೇನಾದರು ಆ ಸಮಯದಲ್ಲಿ ಆ ಬೆಟ್ಟದ ಬುಡದಲ್ಲಿ ಬರುತ್ತಿದ್ದರೆ ಆಗ ನಮ್ಮ ಗತಿ!

ಇನ್ನೂ ಮುಂದಕ್ಕೆ ಮುಂದುವರಿಯುತ್ತ ಮುಂದುವರಿಯುತ್ತ ಹಿಮ ಕರಗಿದ ನೀರಿನಿಂದ ಕೂಡಿದ ಅನೇಕ ಪುಟ್ಟ ಪುಟ್ಟ ಝರಿಗಳನ್ನು ದಾಟ ಬೇಕಾಯಿತು. ಅವುಗಳಲ್ಲಿ ಕಾಲಿಟ್ಟ ಒಡನೇ ಕಾಲುಗಳು ತಮಗೆ ಅಸ್ತಿತ್ವ ವೆಂಬುದೊಂದಿದೆ ಎಂಬುದನ್ನು ಸಂಪೂರ್ಣವಾಗಿ ಮರೆತೇಬಿಡುತ್ತಿದ್ದುವು. ಅಂಥಾ ಕೊರೆತ ಆ ಝರಿಗಳಲ್ಲಿ! ಅವುಗಳನ್ನು ದಾಟಿದ ಬಳಿಕ ಸ್ವಲ್ಪ ಹೊತ್ತು ಕುಳಿತು ಕಾಲುಗಳನ್ನು ಚೆನ್ನಾಗಿ ತಿಕ್ಕಿ ಅವುಗಳಲ್ಲಿ ರಕ್ತ ಸಂಚಾರ ವಾಗುವ ಹಾಗೆ ಮಾಡಬೇಕಾಗಿತ್ತು.

ನಾವು ಸಿಯಾಂಗ್ಚಮ್ಮನ್ನು ಮುಟ್ಟಿದಾಗಲಂತೂ ನಾಲ್ಕು ದಿಕ್ಕುಗಳಿಂದಲೂ ಚಳಿ ಸೂಜಿಯೋಪಾದಿಯಲ್ಲಿ ನಮ್ಮ ಚರ್ಮವನ್ನು ಚುಚ್ಚಲಾರಂಭಿಸಿತು. ಅಪರಾಹ್ಣ ಎರಡು ಘಂಟೆ ಸಮಯದಲ್ಲೇ ಚಳಿಯ ಪ್ರತಾಪ ಇಷ್ಟರ ಮಟ್ಟಿಗೆ ಇರುವಾಗ ಇನ್ನೂ ಸಾಯಂಕಾಲ ಆಗುತ್ತ ಆಗುತ್ತ, ಕೊನೆಗೆ ರಾತ್ರಿ ಬಂದಾಗ ಅದರ ಪ್ರತಾಪ ಎಷ್ಟರ ಮಟ್ಟಿನದಾಗಬಹುದು ಎಂಬ ಭಯ ನಮ್ಮ ಹೃದಯವನ್ನು ತಲ್ಲಣಿಸಲಾರಂಭಿಸಿತು. ನೋಡುತ್ತೇವೆ, ಅಲ್ಲಿ ಯಾವ ಕಡೆಗೆ ಕಣ್ಣು ತಿರುಗಿಸಿದರೂ ಹಿಮ ಸುಮ್ಮನೆ ರಾಶಿ ರಾಶಿಯಾಗೇ ಬಿದ್ದಿದೆ. ನೆಲವೆಲ್ಲಾ ಒದ್ದೆಮುದ್ದೆಯಾಗಿದೆ. ಸ್ವಲ್ಪ ಒದ್ದೆ ಕಡಮೆಯಾಗಿರುವ ಪ್ರದೇಶವನ್ನು ಆರಿಸಿಕೊಂಡು ನಮ್ಮ ಟೆಂಟುಗಳನ್ನು ಹಾಕಿದೆವು. ಸಾಯಂಕಾಲದ ವರೆಗೂ ಹಿಮಾವೃತ ಬೆಟ್ಟಗಳ ಅದ್ಭುತ ದೃಶ್ಯವನ್ನು ನೋಡುತ್ತಲೇ ಕಾಲ ಕಳೆದೆವು. ನಮ್ಮಲ್ಲಿ ಕೆಲವರು ಆ ಹಿಮ ಶಿಖರಗಳನ್ನು ಹತ್ತಿ ಜಾರುಗುಪ್ಪೆ ಆಟವನ್ನೂ ಆಡಿದರು.

ಇಡೀ ರಾತ್ರಿಯೆಲ್ಲಾ ಸೋನೆ ಮಳೆ ಬೇರೆ ಹೊಯ್ದು ಆಗಲೇ ಹರಿತವಾಗಿದ್ದ ಚಳಿಯ ಆಯುಧಕ್ಕೆ ಇನ್ನೂ ಹೆಚ್ಚಿನ ಹರಿತವನ್ನು ಕೊಟ್ಟಿತು. ಹೇಗೋ ಮಾಡಿ ಆ ಚಳಿಯಲ್ಲೇ ಇಡೀ ರಾತ್ರಿಯನ್ನು ಕಳೆದೆವು. ಭಗವಂತನ ಕೃಪೆಯಿಂದ ಮಾರನೆಯ ಪ್ರಾತಃಕಾಲಕ್ಕೆ ಸರಿಯಾಗಿ ಮಳೆ ನಿಂತುಹೋಗಿಬಿಟ್ಟಿತು.

## ಸಿಯಾಂಗ್ಚಮ್ಮನಿಂದ ತಾಕ್ಲಕೋಟೆಗೆ

೧೫,೦೦೦ ಅಡಿ ಎತ್ತರದಿಂದ ೧೩,೧೦೦ ಅಡಿ ಎತ್ತರಕ್ಕೆ. ದೂರ ೧೨ ಮೈಲಿ.

ಪ್ರಯಾಣ ಪ್ರಾತಃಕಾಲ ೭ ರಿಂದ ಅಪರಾಹ್ಣ ೨-೪೦ ರ ವರೆಗೆ.

ತಾ|| ೨೮-೭-'೫೧ ಗುರುವಾರ.

ಇಲ್ಲಿಂದ ಲಿಪುಲೇಖ್ ಕಣಿವೆಯ ತುದಿಗೆ ಸುಮಾರು ಮೂರು ಮೈಲಿ ದೂರ ಒಂದೇ ಸಮ ಚಡಾವು—ಒಂದು ಮೈಲಿ ಹಿಮಕರಗಿ ನೀರು ಜಿನುಗುತ್ತಿರುವ ಕಲ್ಲು ಮಣ್ಣುಗಳ ಮೇಲೆ, ಎರಡು ಮೈಲಿ ಬರಿ ಹಿಮದ ರಾಶಿಯ ಮೇಲೆ. ಇಂದೇ ನಮ್ಮ ಐ. ಎ. ಎಸ್. ಪರೀಕ್ಷೆ. ಅದರಲ್ಲಿ ಹೇಗೆ ತೇರ್ಗಡೆ ಹೊಂದುವೆವೊ ಅಂತ ನಮ್ಮ ಪ್ರತಿಯೊಬ್ಬರ ಹೃದಯವೂ ಸುಮ್ಮನೆ ತಲ್ಲಣಿಸುತ್ತಿದ್ದುವು. ಇಂದು ನಾವು ಬಿಸಿಲೇರುವುದರೊಳಗಾಗಿ ೧೬,೭೫೦ ಅಡಿ

ಎತ್ತರವಿರುವ ಲಿಪುಲೇಖ್ ಕಣಿವೆಯನ್ನು ದಾಟಿದರೇನೇ ನಮಗೆ ಟಿಬೆಟ್ಟಿಗೆ ಪ್ರವೇಶ. ಆ ಬಳಿಕವೇ ನಮಗೆ ಕೈಲಾಸಪತಿಯ ದರ್ಶನ.

ಜನರು ನನಗೆ ತಿಳಿಸಿದ್ದರು: "ಹಿಮ ಪ್ರದೇಶದಲ್ಲಿ ನಡೆಯುವಾಗ ಒಂದು ವಿಧವಾದ ಮತ್ತು ಬರುತ್ತದೆ. ಆಗ ಮಲಗಿತೆಂದರೆ ಮತ್ತೆ ಮೇಲೆ ಏಳುವ ಹಾಗೇ ಇಲ್ಲ. ಒಮ್ಮೆಗೇ ಕೈಲಾಸವನ್ನು ಸೇರಿಬಿಡಬೇಕಾಗುತ್ತೆ. ಆ ವಿಧದ ಮತ್ತು ಬಂದಾಗಲೆಲ್ಲ ಸಾಕಾದಷ್ಟು ಬ್ರ್ಯಾಂಡಿ ಕುಡಿಯಬೇಕು. ಇಲ್ಲದಿದ್ದರೆ ಒಂದಷ್ಟು ಒಣ ದ್ರಾಕ್ಷಿಯನ್ನಾದರೂ ತಿನ್ನಬೇಕು." ನನಗೂ ಒಮ್ಮೆ ಅದರ ಪ್ರತ್ಯಕ್ಷ ಅನುಭವ ಆಗಿತ್ತು. ೧೯೪೫ ನೆ ಇಸವಿಯ ಜನವರಿ ತಿಂಗಳಲ್ಲಿ ಎರಡು ದಿನದೊಳಗೆ ಸುಮಾರು ಹದಿನೆಂಟು ಅಡಿ ಯಷ್ಟು ಹಿಮ ಡೆಹರಾಡೂನ್ ಬಳಿ ಇರುವ ಮುಸೌರಿ ಬೆಟ್ಟದ ಮೇಲೆಲ್ಲಾ (೭,೨೦೦ ಅಡಿ ಎತ್ತರ) ಬಿದ್ದಿದೆ ಎಂಬ ವರ್ತಮಾನ ಹರಿದ್ವಾರಕ್ಕೆ ಬಂತು. ಆಗ ನಾನು ಹರಿದ್ವಾರದ ನಮ್ಮ ಸೇವಾಶ್ರಮದಲ್ಲಿದ್ದೆ. ಇನ್ನೊಬ್ಬ ಸ್ವಾಮಿ ಗಳು ಮತ್ತು ನಾನು ಅದನ್ನು ನೋಡಲು ಹೊರಟೆವು. ಎಲ್ಲೆಲ್ಲೂ ಹಿಮ ಸಕ್ಕರೆಯ ರಾಶಿಯೋಪಾದಿಯಲ್ಲಿ ಬಿದ್ದಿತ್ತು. ಮುಸೌರಿ ಪಟ್ಟಣದಲ್ಲಂತೂ ಅದರ ಕೆಲವು ಭಾಗದಲ್ಲಿ ಯಾವುದು ಮನೆ, ಯಾವುದು ಬೀದಿ, ಯಾವುದು ಹಳ್ಳ, ಯಾವುದು ದಿಣ್ಣೆ ಅಂತ ಹೇಳಲಾಗದ ರೀತಿಯಲ್ಲಿ ಹಿಮ ಒಂದೇ ಸಮನೆ ಬಿದ್ದಿತ್ತು. ಮುಖ್ಯ ಬೀದಿಗಳಲ್ಲಿ ಹಿಮದ ರಾಶಿಯನ್ನು ಬಗೆದು ಮನುಷ್ಯರು ತಿರುಗಾಡಲು ಸ್ವಲ್ಪ ದಾರಿ ಮಾಡಿದ್ದರು. ಕೆಲವು ಕಡೆ ಹಿಮದ ಭಾರವನ್ನು ತಡೆಯಲಾರದೆ ಅನೇಕ ಮನೆ ಕುಸಿದುಬಿದ್ದಿದ್ದುವು. ಇನ್ನು ಕೆಲವುಕಡೆ ಜನ ಮನೆಯ ಮೇಲ್ಛಾವಣಿಗೆ ಆಗಾಗ ಹತ್ತಿ ಮೇಲೆ ಬಿದ್ದ ಹಿಮವನ್ನೆಲ್ಲಾ ಕೆಳಕ್ಕೆ ತಳ್ಳಿ ಅದನ್ನು ಸುರಕ್ಷಿತವಾಗಿಡಲು ಪ್ರಯತ್ನಿಸು ತ್ತಿದ್ದರು. ಪ್ರತಿಯೊಂದು ಮನೆಯ ಸೂರುಗಳಿಂದಲೂ ಹಿಮ ಸ್ಫಟಿಕಾ ಕಾರವನ್ನು ತಾಳಿ ಸುಮ್ಮನೆ ಜೋಲಾಡುತ್ತಿತ್ತು. ಮರ ಗಿಡಗಳ ಮೇಲೆಲ್ಲಾ ಹಿಮ ಅಲ್ಲಲ್ಲಿ ಶೇಖರವಾಗಿತ್ತು. ಆ ಅದ್ಭುತ ದೃಶ್ಯವನ್ನು ನೋಡುತ್ತ ನೋಡುತ್ತ ಹಿಮದ ಮೇಲೆ ನಡೆದುಹೋಗುತ್ತಿದ್ದಾಗ, ನನ್ನ ಜೊತೆಯಲ್ಲಿ ಬಂದಿದ್ದವರು ಒಂದು ಜಾಗದಲ್ಲಿ ಹೇಳಿದರು: "ನೀವು ಮುಂದುವರಿಯು ತ್ತಿರಿ. ನನಗೊಂದು ಸ್ವಲ್ಪ ತಲೆ ತಿರುಗಿದಂತಾಗುತ್ತಿದೆ. ಸ್ವಲ್ಪ ಸುಧಾರಿಸಿ ಕೊಂಡು ಬರುತ್ತೇನೆ." ಹಾಗೆ ಹೇಳುವುದೇ ತಡ ಹಿಮದ ಮೇಲೆ ಉರುಳಿ

ಕೊಂಡರು. ಭಗವಂತನ ಕೃಪೆಯಿಂದ ನನ್ನ ಹತ್ತಿರ ಒಂದು ಸ್ವಲ್ಪ ಕಲ್ಲು ಸಕ್ಕರೆ ಇತ್ತು. ಅದನ್ನು ಅವರ ಬಾಯಿಗೆ ಹಾಕಿ ಅವರ ಅಂಗಾಗಗಳನ್ನೆಲ್ಲ ಸ್ವಲ್ಪ ಚೆನ್ನಾಗಿ ಒತ್ತಿದನಂತರ ಅವರು ಚೇತರಿಸಿಕೊಂಡರು. ನಾನು ಹರಿದ್ವಾರಕ್ಕೆ ಹಿಂದಿರುಗಿದ ಮೇಲೆ ಜನ ಹೇಳಿದರು: "ಇವರೇನಾದರು ತಮಗೆ ತಲೆ ಸುತ್ತುತ್ತಿರುವುದನ್ನು ನಿಮಗೆ ತಿಳಿಸದೆ ನೀವು ಹಾಗೇ ಮುಂದು ವರಿಯುತ್ತಿದ್ದಾಗ ಒಂದು ಕಡೆ ಮಲಗಿಬಿಟ್ಟಿದ್ದರೆ ಇವರ ಗತಿ ಮುಗಿದೇ ಹೋಗುತ್ತಿತ್ತು."

ಬೆಳಗ್ಗೆ ಎದ್ದೊಡನೆ ನಮ್ಮ ಪಾರ್ಟಿಯವರು ಸಾಕಾದಷ್ಟು ಬ್ರ್ಯಾಂಡಿ ಯನ್ನು ಕುಡಿದುದಲ್ಲದೆ ಕೈಯಲ್ಲೂ ಸ್ವಲ್ಪ ತೆಗೆದುಕೊಂಡರು. ನಾನು ನನಗಾಗಿ ಸ್ವಲ್ಪ ಒಣ ದ್ರಾಕ್ಷಿಯನ್ನು ಕೊಂಡುಕೊಂಡು ಬಂದಿದ್ದೆ. ಅದನ್ನೇ ಜೇಬಿಗೆ ತುಂಬಿದೆ. ಇಂದು ನಾನು ನನ್ನಲ್ಲಿದ್ದ ಉಣ್ಣೆ ಪೋಷಾಕನ್ನೆಲ್ಲಾ ಹಾಕಿಕೊಂಡು ಅವುಗಳ ಮೇಲೆ ಮಳೆ-ಕೋಟನ್ನೂ ತೊಟ್ಟುಕೊಂಡು ಹೊರಟೆ. ಏಕೆ ಇಷ್ಟೊಂದು ಎಚ್ಚರಿಕೆ ಇಂದು ಎಂದರೆ, ನಾನು ೧೯೪೫ ನೆ ಇಸವಿಯಲ್ಲಿ ಅಮರನಾಥಕ್ಕೆ ಹೋಗಿದ್ದೆ. ಅಲ್ಲಿ ಪಂಚತರಣಿಯಿಂದ ಶೇಷ ನಾಗಿಗೆ ಬರುತ್ತಿದ್ದಾಗ ಸ್ವಲ್ಪ ಸೆಕೆಯಾಗಿ ಕಂಡುಬಂದದ್ದರಿಂದ ಕೇವಲ ಹತ್ತಿ ಬಟ್ಟೆಯನ್ನೇ ಉಟ್ಟು ಉಣ್ಣೆ ಬಟ್ಟೆಗಳನ್ನು ಸಾಮಾನು - ಕುದುರೆ ಮೇಲೆ ಹೇರಿಬಿಟ್ಟಿದ್ದೆ. ಹಾಗೇ ಮುಂದುವರಿಯುತ್ತಿದ್ದಾಗ ಒಂದು ಜಾಗ ದಲ್ಲಿ ಅರ್ಧ ಮೈಲಿ ದೂರ ಹಿಮದ ಮೇಲೆ ನಡೆಯಬೇಕಾಯಿತು. ಅಲ್ಲಿ ವಿಪರೀತ ತಂಗಾಳಿ ತಾನು ತಾನಾಗೇ ಎದ್ದು "ಹೋ!" ಅಂತ ಬೀಸ ಲಾರಂಭಿಸಿತು. ಚಳಿ ನನ್ನ ಕರುಳನ್ನು ಸುಮ್ಮನೆ ಕೊರೆಯಲು ಶುರುಮಾಡಿ ಬಿಟ್ಟಿತು. ಉಣ್ಣೆ ಬಟ್ಟೆ ಹಾಕಿಕೊಳ್ಳೋಣ ಅಂದರೆ ಸಾಮಾನು- ಕುದುರೆ ಆಗಲೇ ಮುಂದುವರಿದುಬಿಟ್ಟಿತ್ತು. ಆ ಚಳಿಯನ್ನು ಹೇಗೊ ಸಹಿಸಿಕೊಂಡು ಶೇಷನಾಗನ್ನು ತಲುಪಿದೆ. ಅಂದಿನಿಂದಲೇ ನನಗೆ ಬೆಟ್ಟದ ಅತಿಸಾರ (ಹಿಲ್ ಡಯೇರಿಯಾ) ಆರಂಭವಾಗಿಬಿಟ್ಟಿತು. ಒಂದು ತಿಂಗಳವರೆಗೆ ಏನು ತಿಂದರೂ ಜೀರ್ಣವಾಗುತ್ತಿರಲಿಲ್ಲ. ತಿಂವದ್ದು ತಿಂದ ಹಾಗೇ ಪ್ರವೃತ್ತಿಯಾಗಿಬಿಡುತ್ತಿತ್ತು. ಬಳಿಕ ಅರಿತೆ: "ಚಳಿ ಪ್ರದೇಶದಲ್ಲಿ ಹೇಗಾ ದರೂ ಮಾಡಿ ಕರುಳು ಹೊಟ್ಟೆ ಈ ಭಾಗವನ್ನು ಯಾವಾಗಲೂ ಶಾಖವಾಗಿ ಇಟ್ಟುಕೊಂಡಿರಬೇಕು. ಇಲ್ಲದಿದ್ದರೆ ಹೊಟ್ಟೆಯ ವ್ಯಾಧಿಗಳಿಗೆ ತುತ್ತಾಗ

ತಾ|| ೬-೬-೧೯೫೧.




ಆಸ್ಕೋಟಿನ ಹತ್ತಿರದಿಂದ ಹಿಮಾಲಯದ ದೃಶ್ಯ.

ತಾ|| ೯-೬-೧೯೫೧



ಧಾರ್ಚುಲದಲ್ಲಿ ಕಾಳೀನದಿ.

ತಾ|| ೨೭-೬-೧೯೧



ಸಿಯಾಂಗ್ಚಮಿಮ್ಮನಿಂದ ಲಿಪ್ಪುಲೇಖ್ ಕಣಿವೆ.
ಗೈಡು ರುಕುಮ್‌ಸಿಂಗ್ ಮತ್ತು ನಮ್ಮ ಟೆಂಟುಗಳು.

ತಾ|| ೪-೭-೧೯೫೧



ಟಿಬೆಟ್ಟಿನ ಹುಡುಗಿಯರು.

ಬೇಕಾಗುತ್ತದೆ" ಎಂಬುದಾಗಿ. ಆದ್ದರಿಂದ ಈ ಸಲ ಬಹಳ ಎಚ್ಚರಿಕೆಯಿಂದ ಹೊರಟೆ.

ಪ್ರಾತಃಕಾಲ ಆರು ಘಂಟೆಗೆ ಸರಿಯಾಗಿ ಭಗವಂತನ ಮೇಲೆ ಭಾರ ಹಾಕಿ ಇಂದಿನ ಪರೀಕ್ಷೆಗೆ ಸಿಯಾಂಗ್ಬ್ವಮ್ಮನ್ನು ಬಿಟ್ಟು ಹೊರಟೇಬಿಟ್ಟೆವು. ಒಂದು ಮೈಲಿ ದೂರ ಹತ್ತಿಹೋಗುವುದರೊಳಗಾಗಿ ನಾವು ಅನೇಕ ಸಣ್ಣ ಸಣ್ಣ ಝರಿಗಳನ್ನು ದಾಟಬೇಕಾಯಿತು. ಬಳಿಕ ಸಮುದ್ರದಂತೆ ಹರಡಿದ್ದ ಹಿಮರಾಶಿಯ ಮೇಲೆ ನಡೆಯಲು ಆರಂಭಿಸಿದೆವು. ಪ್ರತಿಯೊಬ್ಬರಿಗೂ ಒಂದೊಂದು ವಿಧವಾದ ಅದ್ಭುತ ಅನುಭವ. ನದಿಯ ಕಳ್ಳ ಮರಳಿನ ಹಾಗೆ ಅಲ್ಲಿ ಹಿಮ ಶೇಖರವಾಗಿತ್ತು. ಕಾಲು ಹಾಕಿದೊಡನೆ ಮಂಡಿಯುದ್ದಕ್ಕೆ ಒಳಕ್ಕೆ ದೊಸೆದುಕೊಂಡು ಬಿಡುತ್ತಿತ್ತು. ಅಯ್ಯೋ ! ಈ ಕಾಲು ದೊಸೆದು ಕೊಂಡುಬಿಟ್ಟಿತಲ್ಲ ಎಂದು ಇದನ್ನು ಎಳೆದುಕೊಳ್ಳುವುದರಲ್ಲಿ ಇನ್ನೊಂದು ಕಾಲೂ ದೊಸೆದುಕೊಂಡುಬಿಡುತ್ತಿತ್ತು. ಅಯ್ಯೋ! ಅದೂ ದೊಸೆದು ಕೊಂಡುಬಿಟ್ಟಿತಲ್ಲ ಎಂದು ಅದನ್ನು ಎಳೆದುಕೊಳ್ಳುವುದರಲ್ಲಿ ಮತ್ತೆ ಈ ಕಾಲು ದೊಸೆದುಕೊಂಡುಬಿಡುತ್ತಿತ್ತು. ಉದ್ದಕ್ಕೂ ಇದೇ ತರದ ಅನುಭವ. ಕೆಲವೆಡೆಗಳಲ್ಲಿ ಹಿಮ ಆ ರೀತಿಯಾಗಿ ದೊಸೆದುಕೊಂಡುಬಿಡುವುದಂತೆ, ಮನುಷ್ಯ ಒಮ್ಮೆಗೇ ಅದರೊಳಕ್ಕೆ ಕುಸಿದು ಹೂತುಹೋಗಿಬಿಡುವನಂತೆ. ಹಾಗೇನಾದರು ಆದರೆ ಆತನ ಗತಿ ಮುಗಿದೇ ಹೋದಹಾಗೆ. ಕೆಲವೆಡೆ ಗಳಲ್ಲಿ ಅಂಥ ಇಳಿಜಾರು, ಕಾಲಿಟ್ಟೊಡನೆಯೇ ಹಿಮದ ರಾಶಿ ಕೆಳಕ್ಕೆ ಜಾರಿಬಿಡುತ್ತಿತ್ತು. ಅದರೊಡನೆ ನಾವೂ ಕೆಳಕ್ಕೆ ಬೀಳುತ್ತಿದ್ದೆವು. ನಾನು ಮತ್ತು ಕೂಲಿ ಆಳುಗಳು ವಿನಾ ಉಳಿದ ನಮ್ಮ ಪಾರ್ಟಿಯವರೆಲ್ಲರೂ ತಮ್ಮ ತಮ್ಮ ಕುದುರೆಗಳ ಮೇಲೆ ಮುಂದುವರಿಯುತ್ತಿದ್ದರು. ಆ ಕುದುರೆ ಗಳಿಗೂ ಅದೇ ವಿಧದ ಅನುಭವ ಸಾಮಾನು - ಕುದುರೆಗಳ ಪಾಡಂತೂ ಹೇಳತೀರದು. ಆಗಾಗ ಜಾರಿ ಜಾರಿ ಬಿದ್ದು ಏಳುತ್ತಿದ್ದುವು. ಸ್ವಲ್ಪ ದೂರ ನಡೆದರೇ ಸಾಕು ಎದೆ "ಡಬ್ ಡಬ್" ಅಂತ ಹೊಡೆದುಕೊಳ್ಳು ತ್ತಿತ್ತು. ಕೈಕಾಲುಗಳೆಲ್ಲ ಸೋತಂತೆ ತೋರುತ್ತಿದ್ದುವು. ತಲೆ ತಿರುಗಲು ಶುರುವಾದಂತೆ ಆಗುತ್ತಿತ್ತು. ಅಂಥ ಸಮಯದಲ್ಲೆಲ್ಲಾ ನಾನು ನನ್ನ ಜೇಬಿನಲ್ಲಿ ತುಂಬಿಕೊಂಡಿದ್ದ ಒಣ ದ್ರಾಕ್ಷಿಯನ್ನು ತಿನ್ನುತ್ತಿದ್ದೆ. ದ್ರಾಕ್ಷಿ ನಿಜವಾಗಿಯೂ ನನಗೆ ಬಹಳ ಉಪಕಾರಮಾಡಿತು.

ಇಂಥ ಸ್ಥಳಗಳಲ್ಲೆಲ್ಲಾ ನಾವು ಕೂಲಿಂಗ್‌ಗ್ಲಾಸನ್ನು ಹಾಕಿಕೊಳ್ಳಲೇ ಬೇಕು. ಇಲ್ಲದಿದ್ದರೆ ಹಿಮದ ರಾಶಿಯ ಮೇಲೆ ಬಿದ್ದ ಸೂರ್ಯನ ಕಿರಣ ಪ್ರತಿಬಿಂಬಿತವಾಗಿ ನಮ್ಮ ಕಣ್ಣನ್ನು ಸುಮ್ಮನೆ ಕುಕ್ಕುವುವು. ಆದರಿಂದ ಕಣ್ಣಿಗೆ ಬಹಳ ಅಪಾಯವಾಗುವ ಸಂಭವ. ಜನ ಹೇಳುತ್ತಿದ್ದರು: "ಕೂಲಿಂಗ್‌ಗ್ಲಾಸ್ ಹಾಕಿಕೊಳ್ಳದೆ ಹಿಮರಾಶಿಯ ಕಡೆ ನೋಡಿದರೆ ಕಣ್ಣು ಕೆಂಡಗಣ್ಣಾಗಿ ಅನೇಕ ತೊಂದರೆಗಳಿಗೆ ಈಡಾಗಬೇಕಾಗಿ ಬರುತ್ತದೆ" ಎಂಬುದಾಗಿ.

ಇಂದು ನಾವು ಹೊರಟಾಗಲೆ ಮುಖಕ್ಕೆ ಸಾಕಾದಷ್ಟು ವ್ಯಾಸ್ಲೀನನ್ನು ಹಚ್ಚಿದ್ದೆವು. ಹಾಗೆ ಮಾಡದಿದ್ದರೆ ವಿಶೇಷತಃ ತುಟಿ ಮೂಗು ಕೆನ್ನೆ ಹಿಮಗಾಳಿಗೆ ಸಿಕ್ಕಿ ಒಡೆದುಹೋಗಿ ರಕ್ತಸುರಿಸಲಾರಂಭಿಸುವುವು. ಆದ್ದರಿಂದ ಈ ಪ್ರದೇಶಗಳಲ್ಲೆಲ್ಲಾ ಬೆಳಗ್ಗೆ ಎದ್ದೊಡನೆಯೆ ನಮ್ಮ ದಿನಚರಿಯ ಒಂದು ಕರ್ಮ, ಉಡುಪು ಹಾಕಲಾಗದ ಭಾಗಕ್ಕೆಲ್ಲಾ ವ್ಯಾಸ್ಲೀನು ಸವರುವುದು. ಇಷ್ಟು ಎಚ್ಚರಿಕೆಯಿಂದ ಇದ್ದರೂ ನಾವು ಹಿಂದಿರುಗಿ ಗರ್ಭಿಯಾಂಗಿಗೆ ಬರುವುದರಲ್ಲಿ ಮುಖ ಹಿಮದ ಗಾಳಿಗ ಸಿಕ್ಕಿ ನಾವೆಲ್ಲರೂ ಕರೀ ಭೂತಗಳಂತೇ ಕಾಣುತ್ತಿದ್ದೆವು. ಆಗ ನನಗೆ ಅನಿಸಿತು: "ಈಗ ನಾವು ಒಡನೆ ಆಫ್ರಿಕಾಕ್ಕೆ ತೆರಳುವುದಾದರೆ ಅಲ್ಲಿನ ನೀಗ್ರೋಗಳು ನಮ್ಮನ್ನು ತಮ್ಮ ಮೂಲಪುರುಷರೇ ಎಂಬುದಾಗಿ ಭಾವಿಸಿ ನಮಗೆ ನಿಸ್ಸಂದೇಹವಾಗಿಯೂ ಸುಸ್ವಾಗತವೀಯುತ್ತಾರೆ."

ಅಂತು ಇಂತು ಬಿದ್ದು ಎದ್ದು ನಡೆದು ೯-೩೫ರ ಹೊತ್ತಿಗೆ ಲಿಪುಲೇಖ್ ಕಣಿವೆಯ ತುದಿಯನ್ನು ಮುಟ್ಟಿಬಿಟ್ಟೆವು. ಆಗ ನಮ್ಮ ಆನಂದಕ್ಕೆ ಪಾರವೇ ಇಲ್ಲದಂತಾಯಿತು. ಅಲ್ಲಿಂದ ಯಾವ ಕಡೆಗೆ ತಿರುಗಿ ನೋಡಿದರೂ ಎಷ್ಟು ಆನಂದ ದಾಯಕವಾದ ದೃಶ್ಯ ಕಂಡುಬರುತ್ತದೆ ಏನು ಕತೆ! ಎಂಥ ಮನೋಹರ ದೃಶ್ಯ ಸುತ್ತಲೂ. ಭಗವಂತ ಲೀಲಾಮಯ ಎಂಬುದು ಅಲ್ಲಿ ಎದ್ದು ಕಾಣುತ್ತಿತ್ತು. ಇಲ್ಲೇ ನೆಲಸಿಬಿಡೋಣವೇ ಅಂತ ಅನಿಸಲಾರಂಭಿಸಿತು.

ಲಿಪುಲೇಖ್ ಕಣಿವೆಯ ತುದಿ ಹತ್ತಿದೊಡನೆ ನಮ್ಮ ಕೂಲಿ ಆಳುಗಳು ಒಂದು ದೊಡ್ಡ ಕಲ್ಲು ಗುಡ್ಡೆಗೆ "ಜೈ! ಕೈಲಾಸಪತೀಕೀ ಜೈ!" ಎಂಬುದಾಗಿ ಹೇಳಿ ಒಂದೊಂದು ಪುಟ್ಟ ಪುಟ್ಟ ಕಲ್ಲು ಬಿಸಾಡಿದರು. ಕಾರಣ ಕೇಳಲಾಗಿ ಅವರು ಹೇಳಿದರು: "ಭಗವಂತ ನಮ್ಮನ್ನು ಸುರಕ್ಷಿತವಾಗಿ

ಇಲ್ಲಿಗೆ ಕರೆದುಕೊಂಡು ಬಂದುದಕ್ಕಾಗಿ ನಾವು ಇಲ್ಲಿ ಬೇರೇನೂ ದೊರೆಯದೆ ಇರುವುದರಿಂದ ಕಲ್ಲನ್ನೇ ಒಂದು ಪುಷ್ಪ ಎಂಬುದಾಗಿ ಭಾವಿಸಿ ಅದನ್ನು ಭಗವಂತನಿಗೆ ಅರ್ಪಿಸಿದೆವು. ಇಲ್ಲಿಗೆ ಬಂದ ಪ್ರತಿಯೊಬ್ಬ ಪ್ರಯಾಣಿಕನೂ ಒಂದೊಂದು ಕಲ್ಲು ಬಿಸಾಡಿ ಹೋಗುವ ಪದ್ಧತಿ. ಈ ರಾಶಿ ನಿಮಗೆ ತಿಳಿ ಸುತ್ತದೆ ಈ ಮಾರ್ಗವಾಗಿ ಎಷ್ಟೊಂದು ಜನ ಇಲ್ಲಿಗೆ ಬಂದುಹೋಗಿದಾರೆ ಎಂಬುದನ್ನ. ಆದ್ದರಿಂದ ನೀವೂ ಕಲ್ಲಿನ ರೂಪದ ಒಂದು ಪುಷ್ಪವನ್ನ ಭಗವಂತನಿಗೆ ಅರ್ಪಿಸಿ." ನಾನೂ ಹಾಗೆ ಮಾಡಿದೆ. ಉಳಿದ ನಮ್ಮ ಪಾರ್ಟಿಯವರೂ ಹಾಗೇ ಮಾಡಿದರು. ಹಾಗೇ ಅಲ್ಲಿ ಸ್ವಲ್ಪ ಹೊತ್ತು ಕುಳಿತು ವಿಶ್ರಾಂತಿಯನ್ನು ಪಡೆಯುತ್ತ ಭಗವಂತನ ವೈಭವವನ್ನು ಸ್ಮರಿಸಿ ಕೊಳ್ಳಲಾರಂಭಿಸಿದೆವು.

ನಮ್ಮ ಗೈಡು ಬಂದು ಹೇಳಿದ: "ಈಗ ನಾವು ಹೇಗೊ ಮಾಡಿ ಇಲ್ಲಿಯವರೆಗೆ ಹತ್ತೀನೊ ಬಿಟ್ಟೆವು. ತಾಕ್ಲಕೋಟೆ ಕಡೆಗೆ ಇರುವ ಇಳಿಜಾರನ್ನು ನೋಡಿ. ಅದನ್ನು ಇಳಿಯುವುದರಲ್ಲಿ ಗೊತ್ತಾಗುತ್ತೆ ನಮ್ಮ ನಮ್ಮ ಶಕ್ತಿ ಎಷ್ಟೆಷ್ಟರ ಮಟ್ಟಿನದು ಎಂಬುದು. ಈಗ ನಾವು ಮೊದಲು ಸಾಮಾನು-ಕುದುರೆಗಳನ್ನು ಆ ಕಡೆಗೆ ಇಳಿಸಲು ಪ್ರಯತ್ನಿಸುತ್ತೇವೆ. ಆಗ ನಿಮಗೆ ಅನುಭವವಾಗುತ್ತದೆ ನೀವು ಇಳಿಯುವಾಗ ನಿಮ್ಮ ಗತಿ ಏನಾಗು ತ್ತದೆ ಎಂಬುದು!" ಒಂದೆರಡು ಹೆಜ್ಜೆ ಕೆಳಕ್ಕೆ ಇಳಿದ ಸಾಮಾನು-ಕುದುರೆ ಗಳು ತಮ್ಮ ಬೆನ್ನ ಮೇಲಿನ ಹೊರೆಯ ಗುರುತ್ವಾಕರ್ಷಣೆಯನ್ನು ತಡೆಯ ಲಾರದೆ ಪಲ್ಟಿ ಹೊಡೆದು ಒಂದಾದಮೇಲೊಂದು ಉರುಳಿ ಉರುಳಿಕೊಂಡು ಜಾರು ಜಾರುತ್ತ ಕೈ ಕಾಲು ಒದರುತ್ತಾ ಬಹಳ ದೂರ ಕೆಳಗಿನವರೆಗೆ ಹಾಗೇ ಹೋಗಿ ಸ್ವಲ್ಪ ಮಟ್ಟವಾದ ಜಾಗದಲ್ಲಿ ಎದ್ದು ನಿಂತುಕೊಂಡುವು. ವಿಶೇಷತಃ ಅವು ಸಾಯುವ ರೀತಿಯಲ್ಲಿ ಕೈಕಾಲು ಒದರುತ್ತ ಹಲ್ಲು ಕಿರಿದು ಜಾರುತ್ತಿದ್ದುದನ್ನು ನೋಡಿ ನಮ್ಮಗಳ ಹೃದಯವೆಲ್ಲ ಸುಮ್ಮನೆ ಕಂಪಿಸಲಾರಂಭಿಸಿದುವು. "ನಾವು ಹೇಗಪ್ಪ ಇಲ್ಲಿ ಇಳಿಯುವುದು?" ಎಂಬ ಭಯ ನಮ್ಮನ್ನೂ ಸುಮ್ಮನೆ ಕಿತ್ತುತಿನ್ನಲಾರಂಭಿಸಿತು. ಆದರೇನು ಮಾಡುವುದು? ಇದರಲ್ಲೂ ನಾವು ತೇರ್ಗಡೆ ಆಗಲೇಬೇಕು.

ಸ್ವಲ್ಪ ಹೊತ್ತಾದ ನಂತರ ನಾವೂ ಇಳಿಯಲಾರಂಭಿಸಿದೆವು. ಒಂದು ಕೈಯಲ್ಲಿ ವಾಕಿಂಗ್‌ಸ್ಟಿಕ್ ಇನ್ನೊಂದು ಕೈಯಲ್ಲಿ ಛತ್ರಿ ಹಿಡಿದು ಅವೆರ ಡನ್ನೂ ಆಸರೆಯನ್ನಾಗಿ ಮಾಡಿಕೊಂಡು ನಾಲ್ಕು ಕಾಲಿನ ಪ್ರಾಣಿಯ

ಹಾಗೆ ಇಳಿಯಲಾರಂಭಿಸಿದೆ. ಎಷ್ಟೇ ಜಾಗ್ರತೆಯಿಂದ ಕಾಲಿಟ್ಟರೂ ಅನೇಕ ವೇಳೆ ಜಾರಿಬಿದ್ದೆ. ನಮ್ಮ ಪಾರ್ಟಿಯವರ ಪ್ರತಿಯೊಬ್ಬರಿಗೂ ಇದೇ ತರದ ಅನುಭವ ಎಲ್ಲರೂ ಜಾರುತ್ತ ಬೀಳುತ್ತ ಮತ್ತೆ ಏಳುತ್ತ ಎರಡು ಫರ್ಲಾಂಗಿನಷ್ಟು ದೂರ ಮುಂದುವರಿದೆವು. ಬಳಿಕ ಒಂದು ದೊಡ್ಡ ಹಿಮಪ್ರವಾಹ (ಗ್ಲೇಷಿಯರ್) ಸಿಕ್ಕಿತು. ಅದರ ಮಧ್ಯೆ ಅಲ್ಲಲ್ಲಿ ಹಿಮ ಗಡ್ಡೆಗಳು ಜಗಜಟ್ಟಿಗಳಂತೆ ನಿಂತಿದ್ದುವು. ಆ ಪ್ರವಾಹದಲ್ಲೇನಾದರು ಕಾಲು ಇಟ್ಟದ್ದೇ ಆದರೆ ಶೈತ್ಯದ ದೆಸೆಯಿಂದ ಕಾಲಿನ ಗತಿ ಮುಗಿದೇ ಹೋಗುವಂತೆ ಇತ್ತು. ಸಾಮಾನು-ಕುದುರೆಗಳು ಬಹಳ ಪ್ರಯಾಸದಿಂದ ಅದನ್ನು ದಾಟಲಾರಂಭಿಸಿದುವು. ಒಂದು ಸಾಮಾನು - ಕುದುರೆ ಆ ಪ್ರವಾಹದ ವೇಗಕ್ಕೆ ಸಿಕ್ಕಿ ಕೊಚ್ಚಿಕೊಂಡುಹೋಗಲಾರಂಭಿಸಿತು. ಅದರ ಮಾಲೀಕ ಅದನ್ನು ರಕ್ಷಿಸಲು ಹೋಗಿ ಅವನೂ ಕುದುರೆಯೊಡನೆ ಕೊಚ್ಚಿಕೊಂಡುಹೋಗಲಾರಂಭಿಸಿದ. ನಮ್ಮೆಲ್ಲರ ಹೃದಯಗಳೂ ನಡುಗಲಾರಂಭಿಸಿದುವು: "ಅಯ್ಯೋ! ಕುದುರೆ ಯೋಚನೆ ಈಗ ಸ್ವಲ್ಪ ಒತ್ತಟ್ಟಿಗಿರಲಿ. ಅದರಮೇಲಿನ ಸಾಮಾನು ಬೇಕಾದರೆ ಹಾಳಾಗಿ ಹೋಗಲಿ. ಆ ಮನುಷ್ಯ ಬದುಕಿ ಬಂದುಬಿಟ್ಟರೆ ಸಾಕಪ್ಪ ದೇವರೆ!" ಎಂಬುದಾಗಿ. ಆತ ಮತ್ತು ಕುದುರೆ ಆ ರೀತಿಯಾಗೇ ಕೊಚ್ಚಿಕೊಂಡುಹೋಗುತ್ತಿರುವಾಗ ಭಗವಂತನ ಕೃಪೆಯಿಂದ ಅವರ ದಾರಿಯಲ್ಲಿ ಅಡ್ಡಲಾಗಿ ಬಿದ್ದಿದ್ದ ಒಂದು ಹಿಮಗಡ್ಡೆ ಅವರನ್ನು ತಡೆದು ನಿಲ್ಲಿಸಿತು. ಆಗ ಆತ ಹೇಗೊ ಮಾಡಿ–ಬಹಳ ಗಟ್ಟಿ ಮುಟ್ಟಾದ ಆಸಾಮಿಯೇ – ತಾನೂ ಆಚೆ ದಡವನ್ನು ತಲುಪಿದುದಲ್ಲದೆ ಕುದುರೆಯನ್ನೂ ಮೇಲಕ್ಕೆ ಎಳೆದುಕೊಂಡುಬಂದ. ಆತ ಬದುಕಿ ಬಂದದ್ದು ಭಗವಂತನ ವಿಶೇಷ ಕೃಪೆಯಿಂದಲೇ ಅಂತ ಹೇಳಬೇಕು. ಬಳಿಕ ಉಳಿದ ಕೂಲಿಗಳೆಲ್ಲ ಆತನ ಯೋಗಕ್ಷೇಮ ನೋಡಿಕೊಳ್ಳಲಾರಂಭಿಸಿದರು. ನಾವೂ ಹೇಗೋ ಪ್ರಯಾಸ ಪಟ್ಟು ಆಚೆ ದಡವನ್ನು ತಲುಪಿಬಿಟ್ಟೆವು.

ಇನ್ನೂ ಕೆಲವೆಡೆಗಳಲ್ಲಿ ಹಿಮ ಕರಗಿ ಗಾಜಿನಂತೆ ಕಟ್ಟಿಕೊಂಡುಬಿಟ್ಟಿತ್ತು. ಅದರ ಮೇಲೇನಾದರೂ ಕಾಲು ಬಿತ್ತು ಎಂದರೆ ಸರ್ರನೆ ಜಾರಿ ಹಲ್ಲು ಮುರಿದುಕೊಳ್ಳುವ ಪ್ರಸಂಗ ಕಾದುಕೊಂಡೇ ಇತ್ತು. ಅಂಥ ಸ್ಥಳಗಳಲ್ಲೆಲ್ಲಾ ಬಹಳ ಜಾಗರೂಕತೆಯಿಂದ ಕಾಲು ಹಾಕಿ ಮುಂದುವರಿಯಬೇಕಾಗಿ ಬಂತು. ಅಂತು ಹಾಗೂ ಹೀಗೂ ಮಾಡಿ ಈ ಭಾಗದ ಸುಮಾರು ಒಂದೂವರೆ ಮೈಲಿಯುಷ್ಟಿನ ಹಿಮ ಪ್ರದೇಶವನ್ನು ದಾಟಿ ಒಂದು ಸುರಕ್ಷಿತ

ಜಾಗಕ್ಕೆ ಬಂದು ಸೇರಿದೆವು. ಅಲ್ಲಿ ಕುಳಿತುಕೊಂಡು ನಾವು ಪ್ರತಿಯೊಬ್ಬರೂ ನಮ್ಮ ನಮ್ಮ ಅನುಭವಗಳನ್ನು ಹೋಲಿಸಿನೋಡಿಕೊಳ್ಳುತ್ತಾ ಹೊಟ್ಟೆ ಹುಣ್ಣಾಗುವವರೆಗೆ ನಕ್ಕೆವು. ನಾನು ಕುದುರೆಯನ್ನು ಉಪಯೋಗಿಸದೆಯೆ ಈ ಮಹಾ ಕಠಿನವಾದ ಲಿಪುಲೇಖ್ ಕಣಿವೆಯನ್ನು ದಾಟಿಬಿಟ್ಟದುದಕ್ಕಾಗಿ ನಮ್ಮ ಪಾರ್ಟಿಯವರಿಗೆಲ್ಲಾ ಮಹದಾನಂದವಾಗಿಬಿಟ್ಟಿತು. ಅವರು ಹೇಳಿದರು: "ಇಂದು ನಮ್ಮ ಸ್ವಾಮಿಗಳು ಡಬ್‌ಲ್ ಎಂ. ಎ. ಅನ್ನು ಫಸ್ಟ್ ರ್‍ಯಾಂಕಿನಲ್ಲಿ ಪಾಸು ಮಾಡಿಬಿಟ್ಟರು." ನಮ್ಮನ್ನೆಲ್ಲಾ ಆ ಮಹಾ ಭೀಕರ ಲಿಪುಲೇಖ್ ಕಣಿವೆಯಿಂದ ಸುರಕ್ಷಿತವಾಗಿ ಪಾರುಮಾಡಿಸಿದುದಕ್ಕಾಗಿ ನಾವೆಲ್ಲರೂ ಭಗವಂತನಿಗೆ ಹೃತ್ಪೂರ್ವಕ ವಂದನೆಗಳನ್ನು ಅರ್ಪಿಸಿ ಅಲ್ಲಿಂದ ಸುಮಾರು ಇನ್ನೂ ಒಂದೂವರೆ ಮೈಲಿ ದೂರ ಮುಂದುವರಿದು ಪ್ಯಾಲ ಎಂಬ ಸ್ಥಳಕ್ಕೆ ಬಂದು ಟಿಫಿನ್ನು ತೆಗೆದುಕೊಂಡೆವು.

ಪ್ಯಾಲವನ್ನು ಬಿಟ್ಟು ಮುಂದುವರಿದನಂತರ ಅಕ್ಕ ಪಕ್ಕದ ಬೆಟ್ಟಗಳೆಲ್ಲ ಒಂದು ವಿಧವಾದ ಸುಣ್ಣಕಲ್ಲಿನ ರಾಶಿಯೊ ಏನೊ ಎಂಬಂತೆ ಕಂಡು ಬಂದುವು ಮರಗಿಡಗಳ ಚಿಹ್ನೆಯೇ ಇಲ್ಲ. ಗರಿಕೆಯಂತೂ ಶಾಸ್ತ್ರಕ್ಕೂ ಒಂದು ಸಿಕ್ಕುವ ಹಾಗಿಲ್ಲ ಬಹುಶಃ ಹಿಮದ ದೆಸೆಯಿಂದ ಅವೊಂದೂ ಬದುಕುವುದಿಲ್ಲ ಅಂತ ಕಾಣುತ್ತೆ.

ಇಲ್ಲಿಂದಾಚೆಗೆ ತಾಕ್ಲಕೋಟೆಯವರೆಗೆ ಒಂದೇ ಮಟ್ಟದ ಕಾಲುದಾರಿ. ಲಿಪುಲೇಖ್ ಕಣಿವೆಯಿಂದ ಹರಿದು ಬರುವ ಒಂದು ನದಿಯ ಎಡಪಕ್ಕದಲ್ಲಿ ಸ್ವಲ್ಪ ದೂರ ಮುಂದುವರಿದು ಅನಂತರ ಅದರ ಬಲ ಪಕ್ಕದಲ್ಲಿ ತಾಕ್ಲಕೋಟೆಯ ಸಮೀಪದವರೆಗೆ ಮುಂದುವರಿಯಬೇಕು. ಈ ನದಿಯಿಂದ ಒಂದು ಕಾಲುವೆ ತೆಗೆದುಕೊಂಡು ಹೋಗಿ ತಾಕ್ಲಕೋಟೆಯ ಹತ್ತಿರ ವ್ಯವಸಾಯಮಾಡುತ್ತಿದಾರೆ. ನಾವು ತಾಕ್ಲಕೋಟೆಯನ್ನು ಸಮೀಪಿಸಿದಾಗ ಹಸುರೇ ಹಸುರಾಗಿರುವ ಒಂದು ವಿಶಾಲವಾದ ಗದ್ದೆ ಬಯಲು ಕಾಣಿಸಿತು. ಅಲ್ಲೆಲ್ಲಾ ಬಟಾಣಿ, ಒಂದು ತರದ ಗೋಧಿ ಇವೇ ಮೊದಲಾದುವನ್ನು ಬೆಳೆದಿದ್ದರು. ಈ ಹಸುರುಮಯ ಗದ್ದೆ ಬಯಲು ಆ ಬಣ ಬೆಟ್ಟಗಳ ಮಧ್ಯೆ ಬಹಳ ರಮ್ಯವಾಗಿ ತೋರುತ್ತಿತ್ತು

ಪ್ಯಾಲದಿಂದ ಮುಂದುವರಿದನಂತರ ನನಗೆ ವಿಪರೀತ ಸೆಕೆಯಾಗಲಾರಂಭಿಸಿತು. ಜೊತೆಗೆ ತಡೆಯಲಾರದ ದಾಹ ಬೇರೆ ಆಗಲಾರಂಭಿಸಿತು. ಈ ರೀತಿಯ ಪ್ರವಾಸಗಳಲ್ಲಿ ನಾವು ಎಂದಿಗೂ—ಎಷ್ಟೇ ಆನಂದ ದಾಯಕ

ವಾಗಿದ್ದರೂ— ತಣ್ಣೀರು ಕುಡಿಯಲೇ ಕೂಡದು. ವಿಶೇಷತಃ ಇಂಥಾ ಜಾಗಗಳಲ್ಲಿ ಸಿಕ್ಕುವ ನೀರೆಲ್ಲಾ ಹಿಮ ಕರಗಿ ಬಂದ ನೀರಾಗಿರುವುದರಿಂದ ಬಾಯಿಗೆ ಹಾಕಿದೆವು ಎಂದರೆ ಹಲ್ಲು ಕೊರೆಯಲಾರಂಭಿಸುತ್ತದೆ. ಅಂಥ ನೀರು ಹೊಟ್ಟೆಗೆ ಹೋಯಿತು ಎಂದರೆ ಒಡನೇ ಆಮಶಂಕೆಗೆ ಈಡಾಗ ಬೇಕಾಗುತ್ತದೆ.

ನಾನು ೧೯೪೩ನೆ ಇಸವಿಯಲ್ಲಿ ಕೇದಾರನಾಥ ಬದರೀನಾಥ ಯಾತ್ರೆಗೆ ಹೋಗಿದ್ದೆ. ಆಗ ಸಿಕ್ಕ ಸಿಕ್ಕಿದ ಕಡೆಯಲ್ಲೆಲ್ಲಾ— ಕುಡಿಯುವ ನೀರೇ—ನೀರು ಕುಡಿಯುತ್ತಿದ್ದೆ. ಅದರ ಫಲವಾಗಿ ಒದರೀ ನಾಥನನ್ನು ಮುಟ್ಟುವುದರೊಳಗೇ ನನಗೆ ಆಮಶಂಕೆ ಕಾಣಿಸಿಕೊಂಡುಬಿಟ್ಟಿತು. ಆದರೆ ಭಗವಂತನ ಕೃಪೆಯಿಂದ ಜೋಶೀ ಮಠದ ಹತ್ತಿರಕ್ಕೆ ಇಳಿದು ಬರುವು ದರಲ್ಲೇ ಅದು ನಿಂತುಹೋಯಿತು. ಆದ್ದರಿಂದ ಈ ಯಾತ್ರೆಯಲ್ಲಿ ಕುಡಿಯುವ ನೀರಿನ ಸಂಬಂಧವಾಗಿ ಬಹಳ ಬಹಳ ಎಚ್ಚರಿಕೆಯಿಂದ ಇದ್ದೆ. ಬಿಸಿ ನೀರು ವಿನಾ ತಣ್ಣೀರನ್ನು ಒಂದು ದಿನವೂ ಕುಡಿಯಲೇ ಇಲ್ಲ. ಆದರೆ ಮಧ್ಯ ದಾರಿಯಲ್ಲಿ ಬಾಯಾರಿದಾಗ ಬಿಸಿ ನೀರನ್ನು ತರುವುದು ಎಲ್ಲಿ? ಅದಕ್ಕಾಗಿ ಇಂದು ಎಲ್ಲೆಲ್ಲಿ ನೀರು ಸಿಕ್ಕಿತೊ ಅಲ್ಲೆಲ್ಲಾ ಬಾಯನ್ನು ಮಾತ್ರ ನೀರಿನಿಂದ ಮುಕ್ಕುಳಿಸಿ ಗಂಟಲು ಒಣಗಿಹೋಗುತ್ತಿದ್ದುದನ್ನು ಕಡಮೆಮಾಡಿಕೊಳ್ಳುತ್ತಾ ಮುಂದುವರಿದೆ.

ಹಾಗೇ ಮುಂದು ಮುಂದುವರಿಯುತ್ತ ಕೆಲವು ಮನೆಗಳು ಕಣ್ಣಿಗೆ ಬಿದ್ದುವು. ಅವು ದಕ್ಷಿಣ ಭಾರತದಲ್ಲಿ ಕಾಣಬರುವ ಮಣ್ಣು ಹೊದಿಸಿದ ಮಾಳಿಗೆ ಮನೆಗಳ ಹಾಗೆ ಕಂಡುಬಂದುವು. ನಾವು ಆ ಊರಿನ ಕಡೆಗೆ ಮುಂದುವರಿಯುತ್ತಿದ್ದುದನ್ನು ನೋಡಿ ಅಲ್ಲಿನ ಮಕ್ಕಳು ಮರಿ, ಗಂಡು ಹೆಣ್ಣು ಎಲ್ಲರೂ ಮನೆಯಿಂದ ಹೊರಕ್ಕೆ ಬಂದು ನಮ್ಮನ್ನೇ ದಿಟ್ಟಿಸಿ ನೋಡ ಲಾರಂಭಿಸಿದರು. ಅವರ ಮೈಯ ಕೊಳಕುವಾಸನೆ ಬಹಳ ದೂರದಿಂದಲೇ ನಮಗೆ ಸುಸ್ವಾಗತವೀಯುತ್ತಿತ್ತು. ಅವರ ಹತ್ತಿರಕ್ಕೆ ಬಂದು ನೋಡಿದಾಗ ನನಗನಿಸಿತು: "ಬಹುಶಃ ಇವರು ಸ್ನಾನಮಾಡಿ ಕೆಲವು ಜನ್ಮಗಳೇ ಆಗಿರ ಬೇಕು! ಬಟ್ಟೆಯನ್ನಂತೂ ಒಗೆದು ಕೆಲವು ಸಹಸ್ರ ವರ್ಷಗಳೇ ಆಗಿರ ಬೇಕು. ಇದರಲ್ಲಿ ಯಾವ ಸಂದೇಹವೂ ಇಲ್ಲ!" ಎಂಬುದಾಗಿ. ಬಟ್ಟೆಗಳೆಲ್ಲ ಬೆವರಿನಿಂದ ಮೇಣಗಪಟಗಳಂತಾಗಿದ್ದುವು. ಅಲ್ಲಲ್ಲಿ ಜನರು ಬಿಸಿಲು ಕಾಯುತ್ತ ಕುಳಿತು ತಮ್ಮ ತಮ್ಮ ಬಟ್ಟೆಗಳಿಂದ ಕೂರೆ ಕುಕ್ಕುತ್ತಿರುವ

ದೃಶ್ಯ ಕಣ್ಣಿಗೆ ಬಿತ್ತು. ಮೂಗನ್ನು ಹಿಡಿದು ಆದಷ್ಟು ಬೇಗ ಆ ಪ್ರದೇಶ ದಾಟಿ ಆ ಊರಿನ ಬದಿಯಲ್ಲೇ ಹರಿಯುತ್ತಿದ್ದ ಕರ್ನಾಲಿ ನದಿ ದಡಕ್ಕೆ ಇಳಿದುಬಂದುಬಿಟ್ಟೆವು. ಅಲ್ಲಿ ಒಂದು ಮಟ್ಟವಾದ ಜಾಗ ಪತ್ತೆಮಾಡಿ ಬಿಡಾರ ಬಿಟ್ಟೆವು. ಕರ್ನಾಲಿ ನದಿಯ ಆಚೆ ದಡವೇ ತಾಕ್ಲಕೋಟೆ.

ನಮ್ಮ ಬಿಡಾರದ ಎದುರಿಗೆ ಆಚೆಯ ದಡದ ಒಂದು ಎತ್ತರ ಸ್ಥಳದಲ್ಲಿ ಒಂದು ಬೌದ್ಧರ ಆಶ್ರಮ ಕಾಣಿಸಿಕೊಂಡಿತು. ಅದರ ಹೆಸರು "ನಿಮಲಿಂಗ್" ಗೊಂಫ ಅಂತ. ಅದಕ್ಕೆ ರಸ್ತೆ ಆ ರೀತಿಯಾಗಿ ಮೇಲ ಮೇಲಕ್ಕೆ ಸೊಟ್ಟ ಸೊಟ್ಟವಾಗಿ ಹತ್ತಿ ಹೋಗುತ್ತಿತ್ತು ಬಹುಶಃ ಸ್ವರ್ಗವನ್ನೇ ಮುಟ್ಟಲು ಹೋಗುತ್ತಿರುವುದೊ ಏನೊ ಎಂಬಂತೆ. ಅಲ್ಲಿ ಹಿಂದಿನ ಕಾಲ ದಲ್ಲಿ ಸಾವಿರಾರು ಬೌದ್ಧ ಸನ್ಯಾಸಿಗಳ ತರಪೇತು ನಡೆಯುತ್ತಿತ್ತಂತೆ.

ಆಚೆಯ ದಡದಲ್ಲಿದ್ದ ಮನೆಗಳು ಒಂದು ವಿಚಿತ್ರ ರೀತಿಯವಾಗಿ ಕಂಡುಬಂದುವು. ಅವನ್ನು ಒಂದೊಂದು ಗುಹೆಗಳೇ ಎಂಬುದಾಗಿ ಹೇಳ ಬಹುದು. ಕೆಂಪು ಸುಣ್ಣಕಲ್ಲಿನ ಕಾಂಕ್ರೀಟು ಬಂಡೆಗಳ ರಾಶಿಯಂತಿದ್ದ ಆ ಕರ್ನಾಲಿ ನದಿ ದಡವನ್ನು ಕೊರೆದು ಕೊರೆದು ಮನೆ ಮಾಡಿಕೊಂಡಿ ದ್ದರು. ಆ ವಿಚಿತ್ರ ಮನೆಗಳ ಸಾಲನ್ನು ಹತ್ತಿ ದಡದ ಮೇಲಕ್ಕೆ ಬಂದರೆ ತಾಕ್ಲಕೋಟೆಯ ಮಂಡಿ ಸಿಕ್ಕುತ್ತದೆ. ಆ ಮನೆಗಳು ಇನ್ನೂ ವಿಚಿತ್ರ ವಾದುವೆ. ಯಾವುದಕ್ಕೂ ಮೇಲ್ಛಾವಣಿ ಎಂಬುದೇ ಇರಲಿಲ್ಲ. ಪಾಳು ಮನೆಗಳ ಹಾಗೆ ಕಂಡುವು. ಅಲ್ಲಿ ಬೇಸಿಗೆ ಕಾಲದಲ್ಲಿ ಮಾತ್ರ ವ್ಯಾಪಾರ ನಡೆಯುವುದು. ಆಗ ವ್ಯಾಪಾರಿಗಳು—ವಿಶೇಷತಃ ಭಾರತೀಯರು— ಆ ಮನೆಗಳಲ್ಲಿ ಅಂಗಡಿ ಇಡುತ್ತಾರೆ. ಅಲ್ಲಿಗೆ ಬರುವಾಗ ವ್ಯಾಪಾರಿ ಗಳೆಲ್ಲರೂ ತಮ್ಮ ತಮ್ಮ ಜೊತೆಯಲ್ಲಿ ಡೇರಾ ತಂದು ಆ ಪಾಳು ಮನೆಗಳ ಮೇಲೆ ಅದನ್ನು ಹೊದಿಸಿ ಮನೆ ಮಾಡಿಕೊಳ್ಳುತ್ತಾರೆ. ಚಳಿಗಾಲದಲ್ಲಿ ಅಲ್ಲಿ ಹೇರಳವಾಗಿ ಹಿಮ ಬೀಳುವುದರಿಂದ ವ್ಯಾಪಾರ ನಿಂತುಹೋಗಿ ಬಿಡುವುದು. ಆಗ ವರ್ತಕರೂ ತಮ್ಮ ತಮ್ಮ ಸಾಮಾನುಸರಂಜಾಮು ಎಲ್ಲವನ್ನೂ ತೆಗೆದುಕೊಂಡು ಮನೆಗಳನ್ನು ಎಂದಿನಂತೆ ಪಾಳುಬಿಟ್ಟು ತಮ್ಮ ತಮ್ಮ ಸ್ವಸ್ಥಾನಗಳಿಗೆ ತೆರಳುತ್ತಾರೆ. ಹೆಚ್ಚಾಗಿ ಅಲ್ಲಿ ಹಿಮ ಬೀಳುವುದೇ ಆ ಮನೆಗಳಿಗೆ ಛಾವಣಿ ಹಾಕದಿರುವುದಕ್ಕೆ ಕಾರಣ ಎಂಬುದು ಬಳಿಕ ನನಗೆ ಗೊತ್ತಾಯಿತು. ಆಗ ನನಗೆ ಅರ್ಥವಾಯಿತು ಏಕೆ ಅಲ್ಲಿನ ಜನರು ಗುಹೆಗಳಂತೆ ಮನೆ ಮಾಡಿಕೊಂಡಿದಾರೆ ಎಂಬುದು,

ನಾವು ತಾಕ್ಲಕೋಟೆಯನ್ನು ಮುಟ್ಟಿದಾಗ ಎಲ್ಲೋ ಐದಾರು ಅಂಗಡಿಗಳು ಮಾತ್ರ ಬಂದಿದ್ದುವು. ಚೀಣೀಯರು ಆಗ ತಾನೆ ಟಿಬೆಟ್ಟನ್ನು ವಶಮಾಡಿಕೊಂಡಿದ್ದರಿಂದ ಅವರ ರಾಜನೀತಿ ಭಾರತೀಯ ವರ್ತಕರಿಗೆ ಅಷ್ಟು ಸ್ಪಷ್ಟವಾಗಿ ಇನ್ನೂ ಗೊತ್ತಾಗಿರಲಿಲ್ಲ. ಆದ್ದರಿಂದ ಎಂದಿನಂತೆ ಅವರು ಅಲ್ಲಿಗೆ ಬರಲು ಮನಸ್ಸು ಮಾಡಿರಲಿಲ್ಲ. ನಾವು ಕೈಲಾಸ-ಮಾನಸ ಸರೋವರದ ಕಡೆ ಮುಂದುವರಿದ ಕೆಲವು ದಿನಗಳಲ್ಲೇ ಚೀಣೀಯರು ಭಾರತೀಯ ವರ್ತಕರಿಗೆ ತಿಳಿಸಿದರಂತೆ: "ನೀವು ಎಂದಿನಂತೆ ಸುಖವಾಗಿ ಬಂದು ಇಲ್ಲಿ ವ್ಯಾಪಾರ ಮಾಡಿಹೋಗಬಹುದು. ನಾವು ನಿಮಗೆ ಯಾವ ತೊಂದರೆಯನ್ನೂ ಕೊಡುವುದಿಲ್ಲ ನಾವೂ ನಿಮ್ಮ ಬಂಧುಗಳೇ" ಎಂಬುದಾಗಿ. ನಾವು ಹಿಂದಿರುಗಿ ತಾಕ್ಲಕೋಟೆಗೆ ಬರುವುದರಲ್ಲಿ ಅನೇಕ ಭಾರತೀಯರು ಬಂದು ಅಂಗಡಿ ತೆರೆದಿದ್ದರು.

ಇಂದು ನಾವು ಇಲ್ಲಿಗೆ ಬಂದನಂತರ ಅಡಿಗೆಮಾಡಿ ಊಟ ಮುಗಿಸುವುದರೊಳಗೇ ಸಾಯಂಕಾಲ ಆರು ಘಂಟೆಯಾಯಿತು. ಬಳಿಕ ಒಂದು ದೊಡ್ಡ ಆಲಿಕಲ್ಲು ಮಳೆ ಬಂತು. ಟೆಂಟಿನ ಸುತ್ತಲೂ ಕಾಲುವೆ-ಗೀಲುವೆ ಎಲ್ಲಾ ತೆಗೆದಿದ್ದರೂ ಒಳ್ಳೆ ಭಾರಿ ಮಳೆಯಾದ್ದರಿಂದ ನಮ್ಮೆಲ್ಲರ ಟೆಂಟಿನ ಒಳಕ್ಕೂ ನೀರು ನುಗ್ಗಿಯೇಬಿಟ್ಟಿತು. ಒಹಳ ಪ್ರಯಾಸಪಟ್ಟು ನಾವು ನಮ್ಮ ನಮ್ಮ ಹಾಸಿಗೆ ಬಟ್ಟೆಬರೆಗಳನ್ನು ರಕ್ಷಿಸಿಕೊಂಡೆವು. ಮಳೆ ನಿಲ್ಲುವುದರಲ್ಲಿ ರಾತ್ರಿ ಏಳೂವರೆ ಆಯಿತು. ನಾವು ಟೆಂಟುಹಾಕಿದ್ದ ಜಾಗಕ್ಕಿಂತ ಉತ್ತಮವಾದ ಜಾಗ ಬೇರೆಲ್ಲಿಯೂ ದೊರೆಯದೇ ಹೋದುದರಿಂದ ಆ ಒದ್ದೆ ನೆಲದ ಮೇಲೆ ಇಡೀ ರಾತ್ರಿಯನ್ನು ಹೇಗೋ ಮಾಡಿ ಕಳೆದೆವು. ಬೆಳಗ್ಗೆ ಎದ್ದು ಟೆಂಟುಗಳನ್ನೆಲ್ಲಾ ಬಿಚ್ಚಿ ಆ ಜಾಗವನ್ನೆಲ್ಲಾ ಚೆನ್ನಾಗಿ ಬಿಸಿಲಿನಲ್ಲಿ ಒಣಗಿಸಿದೆವು.

ನಾವು ನಮ್ಮ ಟೆಂಟುಗಳನ್ನು ಒಣಗಿಸುತ್ತಿದ್ದ ಹಾಗೆ ಅನೇಕ ಟಿಬೆಟ್ಟಿನ ಭಿಕ್ಷೆಗಾರರು ಬಂದು ನಮ್ಮನ್ನು ಮುತ್ತಿದರು. ಅಯ್ಯೋ! ಅವರ ಬಟ್ಟೆಬರೆಗಳು ಎಷ್ಟೊಂದು ಚಿಂದಿ ಚಿಂದಿ! ಅಬ್ಬಾ! ಎಂಥಾ ದುರ್ವಾಸನೆ ಅವರ ಮೈಯಿಂದ! ಏನು ಬಡತನ ಅವರದು! ತಂಡತಂಡವಾಗಿ ಬಂದ ಅವರೆಲ್ಲರಿಗೂ ಗೋಧಿ ಹಿಟ್ಟಿನ ಭಿಕ್ಷೆ ನೀಡಿದೆವು. ಭಿಕ್ಷೆ ದೊರೆತ ಒಡನೆ ನಗು ಅವರ ಮುಖದಲ್ಲಿ ನಲಿಯಲಾರಂಭಿಸಿತು. ಅವರಲ್ಲಿ ಕೆಲವರು "ಮಣಿಪದ್ಮೆ ಹ್ಞೂಂ" ಎಂಬುದಾಗಿ ಬರೆಯಲ್ಪಟ್ಟಿದ್ದ ಒಂದು ತರದ

ಯಂತ್ರವನ್ನು ಸತತ ತಿರುಗಿಸುತ್ತಲೇ ಇದ್ದರು. ಹಾಗೆ ತಿರುಗಿಸುವುದರಿಂದ ಅವರಿಗೆ ಮುಕ್ತಿ ದೊರಕುವುದಂತೆ.

ಟಿಬೆಟ್ಟಿನಲ್ಲಿ ಗಂಡಸರು ಹೆಂಗಸರು ಇಬ್ಬರೂ ಬೈತಲೆ ತೆಗೆದುಕೊಂಡು ಜಡೆ ಹೆಣೆದುಕೊಳ್ಳುತ್ತಾರೆ. ಉಡಿಗೆಯಲ್ಲೂ ಗಂಡಸರಿಗೂ ಹೆಂಗಸರಿಗೂ ಅಷ್ಟೇನು ವ್ಯತ್ಯಾಸವಿಲ್ಲ ದೂರದಿಂದ ವ್ಯಕ್ತಿ ಗಂಡಸೊ ಹೆಂಗಸೊ ಎಂಬ ನಿರ್ಧಾರಕ್ಕೆ ಬರುವುದು ಬಹಳ ಕಷ್ಟ. ನನಗಂತೂ ಇದೊಂದು ದೊಡ್ಡ ಸಮಸ್ಯೆಯೇ ಆಗಿಬಿಟ್ಟಿತ್ತು. ಹತ್ತಿರಕ್ಕೆ ಬಂದ ಮೇಲೆ ಗಡ್ಡ ಮೀಸೆಗಳಿಂದ ಗಂಡಸು ಹೆಂಗಸು ಎಂಬುದನ್ನು ಪತ್ತೆ ಮಾಡಲಾಗುವುದಿಲ್ಲವೆ ಅಂದರೆ, ಗಂಡಸಿನ ಗಡ್ಡ ಮೀಸೆ ಪತ್ತೆಮಾಡಬೇಕಾಗಿದ್ದರೆ ದುರ್ಬೀನೇ ಬೇಕಾಗು ತ್ತಿತ್ತು ! ಇಲ್ಲಿನ ಗಂಡಸು, ಹೆಂಗಸು, ಮಕ್ಕಳು ಎಲ್ಲರೂ ವಿವಿಧ ಬಣ್ಣದ ಉಣ್ಣೆ ದಾರದಿಂದ ಹೆಣೆದ ಕಾಲುಚೀಲ ಹಾಕಿಕೊಳ್ಳುತ್ತಾರೆ. ಅದು ಅಷ್ಟೊಂದು ಮಂದವಾಗಿರುತ್ತದೆ, ಅದನ್ನು ಅವರ ಬೂಟ್ಸು ಎಂದೇ ಹೇಳ ಬಹುದು. ಅದನ್ನು ಹೆಣೆಯಲು ಗಂಡಸು ಹೆಂಗಸಾದಿಯಾಗಿ ಮಕ್ಕಳಿಗೂ ಬರುವುದಂತೆ. ಅವರ ಉಡಿಗೆಯಲ್ಲಿ ನನಗೆ ಬಹಳ ಆಕರ್ಷಕವಾಗಿ ಕಂಡದ್ದು ಇದೊಂದೇ ವಸ್ತು. ಅವರಲ್ಲಿ ಅನೇಕರು ಮೃಗ ಚರ್ಮ ನಿರ್ಮಿತ ನಿಲುವಂಗಿಗಳನ್ನು ಹಾಕಿಕೊಳ್ಳುತ್ತಾರೆ.



೫

# ತಾಕ್ಲಕೋಟೆಯಿಂದ ಮಾನಸಸರೋವರಕ್ಕೆ

**ಪ್ರಯಾಣ ತಾ॥ ೩೦-೬-೧೯೫೧ ರಿಂದ ೨-೭-೧೯೫೧ ರ ವರೆಗೆ.**

**ದೂರ ೨೯ ಮೈಲಿ.**

---

ಗರ್ಭಿಯಾಂಗಿನಿಂದ ಇಲ್ಲಿಗೆ ಬಂದಿದ್ದ ಆಳು ಕಾಳು ಎಲ್ಲರೂ ಹಿಂದಿರುಗಿ ಹೊರಟುಹೋದರು. ಈಗ ಇಲ್ಲಿಂದ ಹೊರಟು ಕೈಲಾಸ-ಮಾನಸ ಸರೋವರ ಪ್ರದಕ್ಷಿಣೆಮಾಡಿ ಹಿಂದಿರುಗಿ ಇಲ್ಲಿಗೇ ಬರಲು ಬೇಕಾಗುವ ಆಳುಕಾಳಿನ ವ್ಯವಸ್ಥೆಮಾಡಿಕೊಳ್ಳಲು ನಮಗೆ ಎರಡು ದಿನ ಹಿಡಿಯಿತು.

ಇಲ್ಲಿ ಟಿಬೆಟ್ಟಿನ ಒಬ್ಬ ಗವರ್ನರ್ ಇದಾನೆ. ಆತನ ಅಪ್ಪಣೆ ಪಡೆದೇ ಮುಂದಕ್ಕೆ ಪ್ರಯಾಣ ಬೆಳಸಬೇಕು. ಆತ ಬಹಳ ಒಳ್ಳೆ ಮನುಷ್ಯ. ಆತನ ಅಪ್ಪಣೆಯನ್ನು ಎಂದಿನಂತೆ ಪಡೆದುಕೊಂಡೆವು. ಆದರೆ ನಾವು ಇಲ್ಲಿಗೆ ಬರುವಷ್ಟರಲ್ಲಿ ಚೀಣೀಯ ಸೈನ್ಯವೂ ಇಲ್ಲಿಗೆ ಬಂದುಬಿಟ್ಟಿದ್ದುದರಿಂದ ಚೀಣೀಯ ಕಮ್ಯಾಂಡರ ಅಪ್ಪಣೆಯನ್ನೂ ಪಡೆದುಕೊಳ್ಳಬೇಕಾಯಿತು.

ಟಿಬೆಟ್ಟಿನಲ್ಲಿ ಕೈಲಾಸಗಿರಿ, ಮಾನಸಸರೋವರ ಇವನ್ನು ಬಿಟ್ಟರೆ ಇನ್ನೂ ಎರಡು ಪ್ರೇಕ್ಷಣೀಯ ಸ್ಥಳಗಳಿವೆ: ಒಂದು ತೀರ್ಥಪುರಿ, ಇನ್ನೊಂದು ಖೋಚರನಾಥ್. ತೀರ್ಥಪುರಿ ಕೈಲಾಸಗಿರಿಯಿಂದ ಪಶ್ಚಿಮಕ್ಕೆ ಸುಮಾರು ೩೭ ಮೈಲಿ ದೂರದಲ್ಲಿದೆ. ಅಲ್ಲೇ ಅಂತೆ ಶ್ರೀ ಮಹಾವಿಷ್ಣು ಮೋಹಿನಿ ರೂಪ ತಾಳಿ ಭಸ್ಮಾಸುರನನ್ನು ಸಂಹಾರಮಾಡಿದ್ದು. ಈಗಲೂ ಅಲ್ಲಿ ಭಸ್ಮ ಯಥೇಚ್ಛವಾಗಿ ದೊರೆಯುವುದಂತೆ. ನಾವು ಅಲ್ಲಿಗೆ ಹೋಗಲಾಗಲಿಲ್ಲ. ಖೋಚರನಾಥ್ ಎಂಬುದು ತಾಕ್ಲಕೋಟೆಯಿಂದ ಪೂರ್ವಕ್ಕೆ ಹನ್ನೆರಡುಮೈಲಿ ದೂರದಲ್ಲಿದೆ. ಅಲ್ಲಿ ಒಂದು ಬೌದ್ಧರ ಆಶ್ರಮ (ಗೊಂಫ) ಇದೆ. ಆ ಆಶ್ರಮದಲ್ಲಿ ಅಷ್ಟ ಧಾತುವಿನಿಂದ ನಿರ್ಮಿತವಾದ ಮೂರು ಪ್ರತಿಮೆಗಳಿವೆ. ಅವುಗಳ ಪೀಠ ಐದು ಅಡಿಯಷ್ಟು ಎತ್ತರವಾಗಿದೆ. ಮಧ್ಯದಲ್ಲಿರುವ ಪ್ರತಿಮೆಗೆ "ಮಂಜು ಶ್ರೀ" ಅಂತ ಹೆಸರು. ಅದರ ಎತ್ತರ ಎಂಟು ಅಡಿ. ಅದಕ್ಕೆ ಎರಡು ಚಿನ್ನದ ಎರಡು ಬೆಳ್ಳಿಯ ಒಟ್ಟು ನಾಲ್ಕು ಕೈಗಳಿವೆ. ಆದರ ಬಲ ಭಾಗದಲ್ಲಿರುವ ಪ್ರತಿಮೆಗೆ "ಅವಲೋಕೇಶ್ವರ" ಅಂತ ಹೆಸರು.

ಅದರ ಎತ್ತರ ಏಳು ಅಡಿ. "ಮಂಜುಶ್ರೀ" ಯ ಎಡ ಭಾಗದಲ್ಲಿ ಇನ್ನೊಂದು ಪ್ರತಿಮೆ ಇದೆ. ಅದರ ಎತ್ತರವೂ ಏಳು ಅಡಿಯೆ, ಆದರೆ ಅದರ ಬಣ್ಣ ಮಾತ್ರ ನೀಲಿ. ಅದರ ಹೆಸರು "ವಜ್ರಪಾಣಿ" ಎಂಬುದಾಗಿ. ಇಲ್ಲಿನ ಜನರು ಅವನ್ನೇ ರಾಮ ಲಕ್ಷ್ಮಣ ಸೀತೆ ಎಂಬುದಾಗಿ ಕರೆಯುತ್ತಾರೆ. ಆದರೆ ಅವೆಲ್ಲಾ ಗಂಡು ಪ್ರತಿಮೆಗಳೇ. ಅವು ರೂಪರೇಖೆಗಳಲ್ಲಿ ದಕ್ಷಿಣ ಭಾರತದ ಪ್ರತಿಮೆಗಳ ಹಾಗೆ ಕಂಡು ಬರುತ್ತವೆ. ಆ ಆಶ್ರಮದ ಪ್ರವೇಶದ್ವಾರದಲ್ಲಿ ಬಹಳ ಭಯೋತ್ಪಾದಕ ಎಂಟು ದ್ವಾರಪಾಲಕ ಪ್ರತಿಮೆಗಳಿವೆ. ಇಲ್ಲಿಗೂ ನಾವು ಹೋಗಲಾಗಲಿಲ್ಲ.

ಟಿಬೆಟ್ಟನ್ನು ಮುಟ್ಟಿದ ಯಾತ್ರಿಕರು ತಮ್ಮ ತಮ್ಮ ಅನುಕೂಲಗಳಿಗೆ ತಕ್ಕಂತೆ ಈ ಕೆಳಗಿನ ರೀತಿಯಲ್ಲಿ ಈ ಪ್ರದೇಶದಲ್ಲಿ ಪ್ರಯಾಣ ಬೆಳಸುತ್ತಾರೆ. ಮೊದಲನೆ ವಿಧದ ಯಾತ್ರಿಕರು ತಾಕ್ಲಕೋಟೆಯಿಂದ ಹೊರಟು ನೇರವಾಗಿ ತೀರ್ಥಪುರಿಯನ್ನು ಮುಟ್ಟಿ ಬಳಿಕ ಕೈಲಾಸಗಿರಿಯ ಪ್ರದಕ್ಷಿಣೆ ಮಾಡಿ ಅನಂತರ ಮಾನಸಸರೋವರದ ಪೂರ್ವ ದಡದಲ್ಲಿ ಮುಂದುವರಿದು ತಾಕ್ಲಕೋಟೆಯನ್ನು ತಲುಪುತ್ತಾರೆ. ಎರಡನೆ ವಿಧದ ಯಾತ್ರಿಕರು ನೇರವಾಗಿ ಮಾನಸಸರೋವರವನ್ನು ಮುಟ್ಟಿ ಅಲ್ಲಿಂದ ಥವ್ಚ್ಚು ಎಂಬ ಜಾಗಕ್ಕೆ ಬಂದು ಸಾಧ್ಯವಾದರೆ ಅಲ್ಲಿಂದ ತೀರ್ಥಪುರಿಗೆ ಹೋಗಿ ಅನಂತರ ಮೊದಲನೆ ಗುಂಪಿನಂತೆ ತಾಕ್ಲಕೋಟೆ ಮುಟ್ಟುತ್ತಾರೆ. ಮೂರನೆ ವಿಧದ ಯಾತ್ರಿಕರು ನೇರವಾಗಿ ಮಾನಸಸರೋವರಕ್ಕೆ ಮುಂದುವರಿದು ಅಲ್ಲಿಂದ ಥವ್ಚ್ಚುವಿಗೆ ಬಂದು ಬಳಿಕ ಕೈಲಾಸಗಿರಿಯ ಪ್ರದಕ್ಷಿಣೆಮಾಡಿ ರಾಕ್ಷಸತಲದ (ರಾವಣನ ಸರೋವರದ) ಮೂಲಕ ತಾಕ್ಲಕೋಟೆಗೆ ಹಿಂದಿರುಗುತ್ತಾರೆ. ನಾಲ್ಕನೆ ವಿಧದ ಯಾತ್ರಿಕರು ಕೇವಲ ಮಾನಸ ಸರೋವರವನ್ನು ಮಾತ್ರ ಮುಟ್ಟಿ ಅಲ್ಲಿಂದಲೇ ಕೈಲಾಸಪತಿಗೆ ನಮಸ್ಕಾರ ಹಾಕಿ ಹಿಂದಿರುಗಿ ತಾಕ್ಲಕೋಟೆಗೆ ಬಂದುಬಿಡುತ್ತಾರೆ.

ನಾವು ತಾಕ್ಲಕೋಟೆಯಿಂದ ಹೊರಡುವಾಗ ಎರಡನೆ ವಿಧದ ಯಾತ್ರಿಕರ ಮಾರ್ಗ ಆರಿಸಿಕೊಂಡು ಕೈಲಾಸಪತಿಯ ಪ್ರದಕ್ಷಿಣೆ ಮಾಡಿದ ನಂತರ ನಮ್ಮ ಪಾರ್ಟಿಯವರ ಅನಾರೋಗ್ಯದ ದೆಸೆಯಿಂದ ಮೂರನೆ ವಿಧದ ಯಾತ್ರಿಕರ ಮಾರ್ಗ ಹಿಡಿದೆವು.

## ತಾಕ್ಲಕೋಟೆಯಿಂದ ರಂಗಂಗಿಗೆ

೧೩,೧೦೦ ಅಡಿ ಎತ್ತರದಿಂದ ೧೫,೪೦೦ ಅಡಿ ಎತ್ತರಕ್ಕೆ. ದೂರ ೯ ಮೈಲಿ.

ಪ್ರಯಾಣ ಬೆಳಗಿನ ೮–೧೦ ರಿಂದ ಅಪರಾಹ್ಣ ೨ ರ ವರೆಗೆ.

ತಾ|| ೩೦-೬-'೫೧ ಶನಿವಾರ.

ಈ ಸಲ ನಾವು ಸಾಮಾನು ಹೊರಲು ಹನ್ನೆರಡು ಚಮರೀಮೃಗ ಮತ್ತು ಎರಡು ಕತ್ತೆಗಳನ್ನು, ಸವಾರಿಗಾಗಿ ಐದು ಕುದುರೆಗಳನ್ನು ಏರ್ಪಾಡುಮಾಡಿಕೊಂಡೆವು. ನೋಡಿ ಈ ಕತ್ತೆಗಳ ಪುಣ್ಯವನ್ನ ! ಅವಕ್ಕೂ ಕೈಲಾಸಪತಿಯ ದರ್ಶನ ದೊರೆಯಿತು.

ಕರ್ನಾಲಿ ನದಿ ದಾಟಿ ಅದರ ಪಾತ್ರದಿಂದ ಇನ್ನೂರು ಅಡಿಯಷ್ಟು ಎತ್ತರವನ್ನು ಹತ್ತಿ ತಾಕ್ಲಕೋಟೆಯ ಮುಂದಿಗೆ ಬಂದೆವು. ಬಳಿಕ ಒಂದು ನೂರು ಅಡಿಯಷ್ಟು ಎತ್ತರದ ಒಂದು ದಿಣ್ಣೆ ಹತ್ತಿದನಂತರ ಕ್ರಮಕ್ರಮೇಣ ಇಳಿಯುತ್ತಾ ಬಂದು ಒಂದು ಮೈಲಿಯಷ್ಟು ದೂರ ಇಳಿದನಂತರ ಒಂದು ನದಿಯ ಹತ್ತಿರಕ್ಕೆ ಬಂದೆವು. ಅದನ್ನು ದಾಟಿದನಂತರ ತಾಕ್ಲಕೋಟೆಯ ಈ ಕಡೆಯಲ್ಲೂ ಒಂದು ಗದ್ದೆ ಬಯಲು ಕಾಣಿಸಿಕೊಂಡಿತು. ಆ ಬಯಲನ್ನು ಬಿಟ್ಟರೆ ಉಳಿದ ಎಲ್ಲಾ ದಿಕ್ಕುಗಳಲ್ಲೂ ಗಿಡಗೆಂಡೆಗಳೇ ಇಲ್ಲದ ಬರೀ ಮಣ್ಣು ಕಲ್ಲುಗಳ ಹಳ್ಳ ತಿಟ್ಟೇ. ಆದರೆ, ಹಾಗೇ ಮುಂದುವರಿಯುತ್ತ ಒಂದು ಮನೆಯ ಆವರಣದಲ್ಲಿ ಎರಡು ದೊಡ್ಡ ಮರಗಳು ಬಹಳ ಸೊಂಪಾಗಿ ಬೆಳೆದಿದ್ದುವು. ಅವು ಯಾವ ಜಾತಿಯವೂ ಗೊತ್ತಾಗಲಿಲ್ಲ. ಎಲೆ ಮಾತ್ರ ಅಶೋಕ ಮರದ ಎಲೆಗಳನ್ನು ಹೋಲುತ್ತಿದ್ದುವು. ಅಲ್ಲಿಂದ ಮುಂದುವರಿದು ಇನ್ನೊಂದು ನದಿ ದಾಟಿ ಒಡನೆಯೇ ಇನ್ನೊಂದು ಎತ್ತರವಾದ ತಿಟ್ಟನ್ನು ಹತ್ತಿದೆವು. ಆ ತಿಟ್ಟು ಅಷ್ಟು ಕಡಿದು ಅದರ ತುದಿಯನ್ನು ಮುಟ್ಟುವುದರಲ್ಲಿ ಬಹಳವಾಗಿ ಸಾಕಾಗಿಹೋಯಿತು. ಅನಂತರ ಸ್ವಲ್ಪ ದೂರದವರೆಗೆ ಮಟ್ಟವಾದ ರಸ್ತೆ ಸಿಕ್ಕಿತು. ಅಲ್ಲಿಂದಾಚೆಗೆ ರಸ್ತೆ ಅಷ್ಟು ಕಷ್ಟವಾಗೇನು ಇರಲಿಲ್ಲ. ಹಾಗೇ ಮುಂದುವರಿದು ರಂಗಂಗ್ ನದಿ ದಡಕ್ಕೆ ಬಂದು ಅಲ್ಲಿ ಬಿಡಾರ ಬಿಟ್ಟೆವು.

ಸಾಯಂಕಾಲ ಆಗುತ್ತ ಆಗುತ್ತ ಆಕಾಶದಲ್ಲಿ ಮೋಡ ಕಟ್ಟಿ ಮಳೆ ಬರುವಂತಾಯಿತು. ಆದರೆ ಅದು ನಾವಿದ್ದ ಜಾಗಕ್ಕೆ ಬಾರದೆ ಬೇರೆ

ಕಡೆಗೆ ಹೊರಟುಹೋಯಿತು. ಭಗವಂತನ ಕೃಪೆಯಿಂದ ಇಲ್ಲಿಂದಾಚೆಗೆ ಮತ್ತೆ ನಾವು ಕಾಳಾಪಾನಿ ಮುಟ್ಟುವವರೆಗೆ ಮಳೆಗೆ ಎಲ್ಲೂ ಸಿಕ್ಕಲೇ ಇಲ್ಲ.

## ರಂಗಂಗ್‌ನಿಂದ ಸೇಕಾಂಗಿಗೆ

೧೪,೪೦೦ ಅಡಿ ಎತ್ತರದಿಂದ ಅಷ್ಟೇ ಎತ್ತರಕ್ಕೆ ದೂರ ೯ ಮೈಲಿ.
ಪ್ರಯಾಣ ಬೆಳಗಿನ ೭ ರಿಂದ ಅಪರಾಹ್ನ ೧ ರ ವರೆಗೆ.
ತಾ|| ೧-೭-'೫೧ ಭಾನುವಾರ.

ಇಂದು ಉದ್ದಕ್ಕೂ ಕಲ್ಲು ಗುಂಡುಗಳಿಂದ ಕೂಡಿದ ರಸ್ತೆಯೇ. ಅಷ್ಟು ಹೆಚ್ಚಾಗಿ ಹಳ್ಳ ತಿಟ್ಟುಗಳೇನಿರಲಿಲ್ಲ. ನಮ್ಮ ಬಲಗಡೆ ಮಾಂಧಾತ ಪರ್ವತ ಕಾಣುತ್ತಿತ್ತು. ಅದು ಹಿಮದಿಂದ ಆವೃತವಾಗಿ ಬಹಳ ರಮ್ಯವಾಗಿ ತೋರುತ್ತಿತ್ತು. ಅದರ ಉತ್ತರ ದಡದಲ್ಲೇ ಮಾನಸಸರೋವರವಿರುವುದು.

ಹಾಗೇ ಮುಂದುವರಿಯುತ್ತ ಮುಂದುವರಿಯುತ್ತ ಇದ್ದಾಗ ನಮ್ಮ ಆಳು ಕಾಳು ಎಲ್ಲರೂ ಒಂದು ದಿಕ್ಕಿಗೆ ತಿರುಗಿ ಸಾಷ್ಟಾಂಗಪ್ರಣಾಮ ಮಾಡಲಾರಂಭಿಸಿದರು. ಕಾರಣ ಕೇಳಲಾಗಿ ಅವರು ಹೇಳಿದರು: "ಅಗೋ ನೋಡಿ ಅಲ್ಲಿ, ಕೈಲಾಸಪತಿ (ಕೈಲಾಸಗಿರಿ) ಕಾಣಿಸಿಕೊಳ್ಳುತ್ತಾ ಇದಾನೆ. ಇದು ನಮ್ಮ ಯಾತ್ರೆಗೆ ಒಂದು ದೊಡ್ಡ ಶುಭ ಶಕುನ. ಈ ಸ್ಥಳದಿಂದ ಯಾವ ಯಾತ್ರಿಕರಿಗೆ ಕೈಲಾಸಪತಿಯ ದರ್ಶನ ದೊರೆಯುವುದೋ ಅವರ ಯಾತ್ರೆ ಯಾವ ತೊಂದರಯೂ ಇಲ್ಲದೆ ಸುಗಮವಾಗಿ ನೆರವೇರಿಬಿಡುತ್ತದೆ."

ಕೈಲಾಸಪತಿಯ ಪ್ರಥಮ ದರ್ಶನಪಡೆದು ನಮ್ಮ ದೇಹ, ಮನಸ್ಸು, ಅಣುರೇಣು ಎಲ್ಲವೂ ಪುಲಕಿತವಾದುವು. ಆನಂದೋತ್ಕರ್ಷ ಸುಮ್ಮನೆ ಹೃದಯದಲ್ಲಿ ತಾಂಡವವಾಡಲಾರಂಭಿಸಿತು. ನಮ್ಮ ಇಡೀ ಜೀವನದ ಹಗಲುಗನಸು—ಕೈಲಾಸ, ಮಾನಸಸರೋವರ ದರ್ಶನ ಮಾಡಬೇಕೆಂಬ ಆಕಾಂಕ್ಷೆ—ಇನ್ನೇನು ಪೂರ್ಣವಾಗುವುದರಲ್ಲಿತ್ತು. ನಮ್ಮ ಕಾರ್ಯಕ್ರಮದ ಪ್ರಕಾರ ನಾಳೆ ದಿನವೇ ನಮಗೆ ಮಾನಸಸರೋವರದ ಪ್ರತ್ಯಕ್ಷ ದರ್ಶನ. ಆದರೆ ನಾವು ನಾಳೆ ೧೬,೨೦೦ ಅಡಿ ಎತ್ತರವಿರುವ ಗುರ್ಲಾ ಕಣಿವೆಯನ್ನು ದಾಟಬೇಕಾಗಿತ್ತು. ಆ ಬಳಿಕವೇ ಮಾನಸಸರೋವರದ ದರ್ಶನ. ಆದರೆ ನಮ್ಮ ಗೈಡು ತಿಳಿಸಿದ್ದ: "ಗುರ್ಲಾ ಕಣಿವೆ ಲಿಪುಲೇಖ್ ಕಣಿವೆಯಷ್ಟು ಕಠಿನವಾದ್ದೇನಲ್ಲ. ಅಲ್ಲಿ ಹಿಮ-ಗಿಮ ಏನನ್ನೂ ದಾಟಬೇಕಾಗಿರುವುದಿಲ್ಲ. ಆದ್ದರಿಂದ ಸ್ವಲ್ಪವೂ ಹೆದರಬೇಕಾಗಿಲ್ಲ" ಎಂಬುದಾಗಿ.

ನಾವು ಹಾಗೇ ಮುಂದುವರಿಯುತ್ತಿದ್ದಾಗ ಆ ಆಂಧ್ರರ ಗುಂಪು ಕೇವಲ ಮಾನಸಸರೋವರ ದರ್ಶನಮಾಡಿ ಹಿಂದಿರುಗುತ್ತಿತ್ತು. ಅವರನ್ನು ನೋಡಿ ನಮಗೂ ಬಹಳ ಆನಂದ ಆಯಿತು. ಅಂತೂ ಹತಾಶ ರಾಗಿದ್ದ ಇವರಿಗೆ ಮಾನಸಸರೋವರದ ದರ್ಶನ ಮತ್ತು ಕೈಲಾಸಪತಿಯ ದೂರ ದರ್ಶನ ಭಗವಂತನ ಕೃಪೆಯಿಂದ ದೊರೆತುಬಿಟ್ಟಿತು.

ಇಂದು ನಮಗೆ ದೊರೆತುದು ಕೈಲಾಸಪತಿಯ ಬಹಳ ದೂರದ ದರ್ಶನವೇನೊ ನಿಜ. ಆದರೆ ಅದೇ ನಮಗೆ ಬಹಳ ಆನಂದವನ್ನು ತಂದು ಬಿಟ್ಟಿತು. ಆ ಆನಂದದಿಂದ ಉಬ್ಬಿ ಉಬ್ಬಿ ಮುಂದುವರಿದು ಸೇಕಾಂಗನ್ನು ತಲುಪಿದೆವು.

ಇಂದಿನ ಇಡೀ ಸಾಯಂಕಾಲವೆಲ್ಲಾ, ರಾತ್ರಿಯೆಲ್ಲಾ ಮಾನಸ ಸರೋವರದ ಕನವರಿಕೆಯೆ. ಎಂದಿಗೆ ಬೆಳಗಾದೀತು ಎನ್ನುತ್ತಲೇ ರಾತ್ರಿ ಯನ್ನು ಕಳೆದೆವು. ಒಂದೊಂದು ನಿಮಿಷವೂ ಒಂದೊಂದು ಯುಗದಂತೆ ತೋರಲಾರಂಭಿಸಿತು. ಶರೀರದ ಪ್ರತಿಯೊಂದು ಅಣುರೇಣುವೂ ಆನಂದ ದಿಂದ ಸುಮ್ಮನೆ ನಲಿಯಲಾರಂಭಿಸಿತು. ಇಡೀ ಶರೀರವೆಲ್ಲ ಬಹಳ ಶಾಖ ವಾಗಿರುವಂತೆ ಕಂಡುಬಂತು. ಮೈ ಮುಟ್ಟಿ ನೋಡಿಕೊಳ್ಳುತ್ತೇನೆ ಜ್ವರ ಬಂದ ಹಾಗೆ ಇದೆ. ಏನದು, ನಿಜವಾದ ಜ್ವರ ಬಂದಿತ್ತೆ? ಇಲ್ಲ, ಆನಂದೋತ್ಕರ್ಷೆಯ ಜ್ವರ. ಆಗ ಶ್ರೀ ರಾಮಕೃಷ್ಣ ಪರಮಹಂಸರ ಒಂದು ಉಪದೇಶ ಜ್ಞಾಪಕಕ್ಕೆ ಬಂತು ಅವರು ಹೇಳಿದಾರೆ: "ಶ್ರೀಮತಿ ರಾಧೆಗೆ ಅಂಥಾ ಪ್ರೀತಿ ಶ್ರೀ ಕೃಷ್ಣನನ್ನು ಕಂಡರೆ, ಆತನ ವಿರಹತಾಪದಿಂದ ಆಕೆ ನೆಲದಮೇಲೆ ಬಿದ್ದಿರುತ್ತಿದ್ದ ಜಾಗ ಸುಟ್ಟು ಕಪ್ಪಾಗಿಬಿಡುತ್ತಿತ್ತು" ಎಂಬು ದಾಗಿ ನನಗೂ ಅನಿಸಿತು: "ನನ್ನ ಈ ಆನಂದೋತ್ಕರ್ಷೆಯ ತಾಪದಿಂದ ನನ್ನ ಹಾಸಿಗೆ-ಗೀಸಿಗೆ ಏನಾದರು ಸುಟ್ಟು ಕಪ್ಪು-ಗಿಪ್ಪಾಗಿ ಬಿಟ್ಟಿರು ವುದೇ ?'' ಟಾರ್ಚುಹಿಡಿದು ನೋಡುತ್ತೇನೆ ಹಾಸಿಗೆ ಇದ್ದದ್ದು ಇದ್ದ ಹಾಗೇ ಇದೆ! ತಡೆಯಲಾರದ ನಗು ಬಂತು. ಆಗ ಮನಸ್ಸು ಹೇಳಿತು: "ಇದೇನು ಹುಚ್ಚುತನ! ಆಕೆಯದು ವಿರಹತಾಪ, ನಿನ್ನದು ಆನಂದೋತ್ಕರ್ಷೆಯ ತಾಪ. ಆಕೆಯದು ಸೂರ್ಯನ ತಾಪವಾದರೆ, ನಿನ್ನದು ಕೇವಲ ಮಿಣುಕು ಹುಳುವಿನ ತಾಪ." ಆದರೂ ನಾನು ಮಾತ್ರ, "ನಾನು ಈಗ ಅನುಭವಿಸು ತ್ತಿರುವ ತಾಪ ರಾಧೆಯದಕ್ಕಿಂತಲೂ ಒಂದು ಡಿಗ್ರಿ ಹೆಚ್ಚಿನದೇ ಆಗಿರಬೇಕು"

ಅಂತ ಭಾವಿಸುತ್ತ ಇಡೀ ರಾತ್ರಿಯನ್ನು ಮಾನಸಸರೋವರದ ಕನವರಿಕೆ ಯಲ್ಲೇ ಕಳೆದೆ.

## ಸೇಕಾಂಗಿನಿಂದ ಮಾನಸಸರೋವರಕ್ಕೆ

೧೪,೦೦೦ ಅಡಿ ಎತ್ತರದಿಂದ ೧೪,೯೦೦ ಅಡಿ ಎತ್ತರಕ್ಕೆ. ದೂರ ೧೧ ಮೈಲಿ.
ಪ್ರಯಾಣ ಬೆಳಗಿನ ೭ ರಿಂದ ಅಪರಾಹ್ಣ ೧೨-೩೦ ರ ವರೆಗೆ.
ತಾ|| ೨-೭-'೫೧ ಸೋಮವಾರ.

ಇಂದು ಹೊರಡುವಾಗಲೇ ನಾವು ಇಡೀ ಪ್ರಪಂಚವನ್ನೇ ಮರೆತಿದ್ದೆವು. ಪ್ರತಿಯೊಂದು ರಕ್ತಕಣವೂ ಹೇಳುತ್ತಿತ್ತು : "ನಾನು ಎಂದಿಗೆ ಮಾನಸಸರೋವರ ಮುಟ್ಟೇನು ? ಎಂದಿಗೆ ಮಾನಸಸರೋವರ ಮುಟ್ಟೇನು ?" ಅಂತ. ನಮ್ಮ ಕನಸು ನನಸಾಗುವ ಶುಭ ದಿನ ಇಂದೇ— ಅದೂ ಇನ್ನೇನು ಕೆಲವು ಘಂಟೆಗಳ ಒಳಗೇ !

ಸೇಕಾಂಗಿನಿಂದ ಹೊರಟನಂತರ ಒಂದು ದಿಣ್ಣೆ ಹತ್ತಿ ಅನಂತರ ಸ್ವಲ್ಪ ದೂರ ಕೆಳಕ್ಕೆ ಇಳಿದೆವು ಆ ಜಾಗದಿಂದ ಗುರ್ಲಾ ಕಣಿವೆ ಸಿಕ್ಕುವ ವರೆಗೆ ಸುಮ್ಮನೆ ಹತ್ತುತ್ತಲೇ ಹೋದೆವು. ಇಂದಿನ ದಾರಿಯೂ ಗುರ್ಲಾದ ವರೆಗೆ ಕಲ್ಲು ಗುಂಡುಗಳಿಂದ ತುಂಬಿತ್ತು. ಆದರೆ ಒಂದೊಂದು ಕಡೆ ಮಣ್ಣಿನ ರಾಶಿಯೂ ಕಾಣಿಸಿಕೊಂಡಿತು. ಅವುಗಳಲ್ಲಿ ಒಂದು ವಿಧವಾದ ಹುಲ್ಲೂ ಬೆಳೆದಿತ್ತು.

ಗುರ್ಲಾ ಕಣಿವೆ ಇನ್ನೇನು ಒಂದು ಮೈಲಿ ದೂರದಲ್ಲಿದೆ ಎನ್ನುವಾಗ ಇದ್ದಕ್ಕಿದ್ದ ಹಾಗೆ ಒಂದು ವಿಚಿತ್ರ ಶಬ್ದ ಕೇಳಿಸಿತು. ಮೈಯೆಲ್ಲ "ಜುಂ" ಎಂದಿತು. ಬಳಿಕ ಮನಸ್ಸು ಹೇಳಿತು : "ಏನಿದು, ಕೊಕ್ಕರೆ ಶಬ್ದದ ಹಾಗೆ ಇದೆಯಿಲ್ಲ ! ಕೈಲಾಸಪತಿಯ ಭೂತ-ಗೀತಗಳ ಶಬ್ದ ಅಲ್ಲ ತಾನ ! ಏನೊ ಯಾರಿಗೆ ಗೊತ್ತಪ್ಪ ?" ಬಳಿಕ ಆ ಶಬ್ದ ಬಂದ ಕಡೆಗೇ ದಿಟ್ಟಿಸಿ ನೋಡಲಾರಂಭಿಸಿದೆ. ನಮ್ಮ ದಕ್ಷಿಣ ಭಾರತದಲ್ಲಿ ಸಾಲುಗಟ್ಟೆ ಹಾರುವ ಕರಿ ಕೊಕ್ಕರೆಯಂಥ ಒಂದು ಕೊಕ್ಕರೆ ಪ್ರತ್ಯಕ್ಷವಾಗಿ ಮೇಲೆ ಹಾರಿಹೋಗುತ್ತಿತ್ತು. ಆಗ ಮನಸ್ಸಿಗೆ ಸ್ವಲ್ಪ ನೆಮ್ಮದಿಯಾಯಿತು. ಆಗ ಮನಸ್ಸು ಹೇಳಿತು : "ಸದ್ಯಕ್ಕೆ ಭೂತ-ಗೀತ ಏನೂ ಅಲ್ಲವಲ್ಲ ! ಬದುಕಿಕೊಂಡೆವು." ಆ ಕೊಕ್ಕರೆ ನಮಗೆ ಸೂಚನೆ ಕೊಟ್ಟಿತು : "ನಾವು ಇನ್ನೇನು ಮಾನಸ

ಸರೋವರವನ್ನು ತಲುಪುವುದರಲ್ಲಿದೇವೆ" ಎಂಬುದಾಗಿ. ನಮ್ಮ ಪ್ರತಿಯೊಬ್ಬರ ಹೃದಯವೂ ಆನಂದದಿಂದ ತುಂಬಿ ತುಳುಕಾಡಲಾರಂಭಿಸಿತು.

ನಾನು ೧೯೪೧ ನೆ ಇಸವಿಯಲ್ಲಿ ಕಲ್ಕತ್ತದಿಂದ ರಂಗೂನಿಗೆ—ನನ್ನ ಪ್ರಥಮ ಸಮುದ್ರ ಪ್ರಯಾಣ—ಜಹಜಿನಲ್ಲಿ ಹೋಗಿದ್ದೆ. ಕಲ್ಕತ್ತವನ್ನು ಬಿಟ್ಟ ಮೂರು ದಿನಗಳವರೆಗೆ ಯಾವ ದಿಕ್ಕಿಗೆ ನೋಡಿದರೂ ಕೇವಲ ನೀರೇ ನೀರು. ಬೇರೇನೂ ಕಣ್ಣಿಗೆ ಬೀಳುತ್ತಿರಲಿಲ್ಲ. ಮಧ್ಯಾಹ್ನದಲ್ಲಂತೂ ಪೂರ್ವವಾವುದು, ಪಶ್ಚಿಮವಾವುದು ಎಂಬುದನ್ನು ಕಂಡುಹಿಡಿಯುವುದು ಬಹಳ ಕಷ್ಟವೇ ಆಗುತ್ತಿತ್ತು. ಕಷ್ಟವೇ ಏಕೆ, ಉತ್ತರಮುಖಿ-ಗಿತ್ತರ ಮುಖಿ ಹತ್ತಿರ ಇಲ್ಲದೆ ಇತ್ತು ಎಂದರೆ ಅದನ್ನು ಕಂಡುಹಿಡಿಯಲಾಗುವುದೇ ಇಲ್ಲ. ನಾಲ್ಕನೆ ದಿನದ ಪ್ರಾತಃಕಾಲ ಕಡಲಗಲ್ ಹಕ್ಕಿಗಳು (ಸೀಗಲ್) ಒಂದೊಂದಾಗಿ ನಮ್ಮ ಜಹಜನ್ನು ಸಮೀಪಿಸಲಾರಂಭಿಸಿದುವು. ಕೊನೆಗೆ ಅವುಗಳ ಒಂದು ದೊಡ್ಡ ತಂಡವೇ ನಮ್ಮ ಜಹಜನ್ನು ಹಿಂಬಾಲಿಸಲಾರಂಭಿಸಿತು. ಆಗ ಜನರು ಹೇಳಿದರು : " ನಾವು ಈಗ ಬರ್ಮಾ ಹತ್ತಿರ ಬಂದುಬಿಟ್ಟಿದೇವೆ. ಇನ್ನು ಕೆಲವು ಘಂಟೆಗಳೊಳಗೇ ರಂಗೂನನ್ನು ತಲುಪಿಬಿಡುತ್ತೇವೆ.'' ನಾನು ಅವರನ್ನು ಕೇಳಿದೆ : " ಎಲ್ಲಿ, ಇನ್ನೂ ಭೂಮಿ-ಗೀಮಿ ಏನೂ ಕಣ್ಣಿಗೆ ಬೀಳುತ್ತಲೇ ಇಲ್ಲವಲ್ಲ. ಹೇಗೆ ಹೇಳುತ್ತಿದೀರಿ ಇನ್ನು ಸ್ವಲ್ಪ ಹೊತ್ತಿನಲ್ಲೇ ರಂಗೂನನ್ನು ತಲುಪಿಬಿಡುತ್ತೇವೆ ಎಂಬುದಾಗಿ ? " ಅವರು ಹೇಳಿದರು : " ನೋಡಿ, ಈ ಕಡಲಗಲ್ ಹಕ್ಕಿಗಳು ಭೂಮಿಯನ್ನು ಬಿಟ್ಟು ಹೆಚ್ಚು ದೂರ ಹಾರಿಬರಲಾರವು. ಈಗ ಅವು ತಂಡ ತಂಡವಾಗಿ ನಮ್ಮನ್ನು ಹಿಂಬಾಲಿಸುತ್ತಿರುವುದರಿಂದ ನಾವು ಬರ್ಮಾ ತೀರದಿಂದ ಹೆಚ್ಚು ದೂರದಲ್ಲೇನಿಲ್ಲ." ಜಹಜು ಬರ್ಮಾತೀರದ ಹತ್ತಿರಕ್ಕೆ ಬರುತ್ತಿದೆ ಎಂಬುದನ್ನು ಕೇಳಿ ಮೂರು ದಿನಗಳಿಂದ ಕೇವಲ ನೀರನ್ನೇ ನೋಡಿ ಬೇಜಾರಾಗಿದ್ದ ಮನಸ್ಸಿಗೆ ಬಹಳ ಆನಂದವಾಗಿಬಿಟ್ಟಿತು. ಹಾಗೇ ಇಂದೂ ನಾವು ಸ್ವಪ್ನ ಕಾಣುತ್ತಿದ್ದ ಮಾನಸಸರೋವರ ಇನ್ನೇನು ಪ್ರತ್ಯಕ್ಷವಾಗುವುದರಲ್ಲಿದೆ ಎಂಬುದನ್ನು ಕೊಕ್ಕರೆ ಸೂಚಿಸಿದ ಒಡನೇ ನಮ್ಮ ಮನಸ್ಸು ಆಕಾಶಕ್ಕೂ ಭೂಮಿಗೂ ನೆಗೆಯಲಾರಂಭಿಸಿತು.

ನಾನು ೯-೨೦ ಕ್ಕೆ ಗುರ್ಲಾ ಕಣಿವೆಯನ್ನು ದಾಟಿದೆ. ಆಗ ನಮ್ಮ ಗೈಡು ಹೇಳಿದ : " ಇನ್ನು ಸ್ವಲ್ಪ ದೂರ ಮುಂದುವರಿದೊಡನೆ— ಐದು ನಿಮಿಷ ಅಂತ ಇಟ್ಟುಕೊಳ್ಳಿ—ಮಾನಸಸರೋವರ ಕಣ್ಣಿಗೆ

ಬೀಳುತ್ತದೆ." ಆ ಮಾತು ಕಿವಿಗೆ ಬಿದ್ದೊಡನೇ ಆದಷ್ಟು ಬೇಗ ಅದರ ದರ್ಶನ ಪಡೆಯಬೇಕೆಂಬ ತೀವ್ರ ಆಕಾಂಕ್ಷೆ ಯಾವ ರೀತಿಯಾಗಿ ನನ್ನ ಹೃದಯವನ್ನು ಮೀಟಲಾರಂಭಿಸಿತು, ಯಾವ ರೀತಿಯಾಗಿ ಕಣ್ಣು ಆ ಕಡೆಗೇ ಏಕದೃಷ್ಟಿಯಿಂದ ನೋಡಲಾರಂಭಿಸಿತು, ಕಾಲು ಯಾವ ರೀತಿಯಾಗಿ ಸುಮ್ಮನೆ ಆ ಕಡೆಗೇ ಧಾವಿಸಲಾರಂಭಿಸಿತು, ಮನಸ್ಸು ಯಾವ ರೀತಿಯಾಗಿ ಮಾನಸಸರೋವರದ ಚಿಂತನೆಯೊಂದನ್ನು ವಿನಾ ಉಳಿದ ಎಲ್ಲಾ ಚಿಂತನೆಗಳನ್ನೂ ವರ್ಜಿಸಿಬಿಟ್ಟಿತು ಎಂಬುದನ್ನ ಬರವಣಿಗೆಯಿಂದಲೇ ಆಗಲಿ—ಅಷ್ಟೇಕೆ, ಮಾತಿನಿಂದಲೇ ಆಗಲಿ ಎಂದಿಗೂ ವರ್ಣಿಸಲಾರೆ.

ಎರಡು ಫರ್ಲಾಂಗು ಮುಂದುವರಿಯುವುದೇ ತಡ ಅನತಿದೂರದಲ್ಲಿ ಸ್ವಚ್ಛ ನೀಲಾಕಾಶದ ಹಾಗೆ ಏನೊ ಒಂದು ಕಣ್ಣಿಗೆ ಕಾಣಿಸಿಕೊಂಡಿತು. ಆಗ ನಮ್ಮ ಗೈಡು ಹೇಳಿದ: "ಅದೇ ಮಾನಸಸರೋವರ." ನಮ್ಮಗಳ ಹೃದಯ ಆನಂದದಿಂದ ಸುಮ್ಮನೆ ಚಿಮ್ಮಲಾರಂಭಿಸಿದುವು. ಮನಸ್ಸು ಸಂಪೂರ್ಣವಾಗಿ ಆ ಪ್ರದೇಶವನ್ನು ಆವರಿಸಿಕೊಂಡುಬಿಟ್ಟು "ಬೇರೆ ಯಾವ ಚಿಂತನೆಯನ್ನೂ ಮಾಡಲೊಲ್ಲೆ" ಎಂದು ನೇರವಾಗಿ ಹೇಳಿಯೇ ಬಿಟ್ಟಿತು. ಆಗ ನನಗೆ ನಾನೇ ಹೇಳಿಕೊಂಡೆ: "ಆಹ! ಭಗವಂತನ ಸೃಷ್ಟಿ ಎಷ್ಟು ಅದ್ಭುತವಾದ್ದು! ಇದು ಎಂಥಾ ವಿಶಾಲವಾದ ಸರೋವರ ಏನು ಕತೆ! ದೊಡ್ಡ ಸಮುದ್ರದ ಹಾಗೇ ಕಾಣುತ್ತಿದೆಯಲ್ಲ! ಹಿಮಾಲಯ ಪರ್ವತದ ಮೇಲೆ ೧೪,೯೦೦ ಅಡಿ ಎತ್ತರದಲ್ಲಿ, ಎಂದರೆ ಸುಮಾರು ಮೂರು ಮೈಲಿ ಎತ್ತರದಲ್ಲಿ ಇಷ್ಟು ವಿಶಾಲವಾದ ಸರೋವರ ಇರಬೇಕಾದರೆ ಹಿಮಾಲಯ ಪರ್ವತ ಎಷ್ಟು ಬೃಹತ್ತಾದುದು! ನಮ್ಮ ಗೈಡು ಕೇಳಿದ: "ಸ್ವಾಮಿಜಿ, ಇದರ ಸುತ್ತಳತೆ, ವಿಸ್ತೀರ್ಣ ಮತ್ತು ಆಳ ನಿಮಗೆ ಗೊತ್ತಿದೆಯೆ?" ಹೇಳಿದೆ: "ಹೌದು, ಗೊತ್ತಿದೆ. ಓದಿದೇನೆ ಸುತ್ತಳತೆ ಐವತ್ತುನಾಲ್ಕು ಮೈಲಿ, ವಿಸ್ತೀರ್ಣ ಸುಮಾರು ಇನ್ನೂರು ಚದರ ಮೈಲಿಯಷ್ಟು, ಆಳ ಇನ್ನೂರೆಪ್ಪತ್ತೈದು ಅಡಿಗಳಷ್ಟು ಎಂಬುದಾಗಿ. ಆಗ ಅದನ್ನು ಸುಮ್ಮನೆ ಓದಿಬಿಟ್ಟದ್ದುದು ಎಷ್ಟೋ ಅಷ್ಟೆ. ಈಗ ಪ್ರತ್ಯಕ್ಷವಾಗಿ ಅದನ್ನು ನೋಡುತ್ತಾ ಇದೇನೆ. ಪ್ರತ್ಯಕ್ಷ, ಕಲ್ಪನೆಯನ್ನು ಮೀರಿಸಿಬಿಟ್ಟಂತೆ ಈಗ ನನಗೆ ತೋರುತ್ತಾ ಇದೆ." ಅದರ ಉತ್ತರ, ಪೂರ್ವ, ದಕ್ಷಿಣ ದಿಕ್ಕುಗಳಲ್ಲಿ ಹಬ್ಬಿದ್ದ ಬೆಟ್ಟದ ಸಾಲುಗಳು ಅದರಲ್ಲಿ ಪ್ರತಿಬಿಂಬಿತವಾಗುತ್ತಿದ್ದುವು. ಉತ್ತರದಲ್ಲಿ ಕೈಲಾಸಗಿರಿಯೊಂದನ್ನು ಬಿಟ್ಟರೆ ಬೇರೆ ಯಾವ ಬೆಟ್ಟದ

ಮೇಲೂ ಹಿಮ ಕವಿದಿರಲಿಲ್ಲ. ಪೂರ್ವದ ಬೆಟ್ಟಗಳ ಸಾಲ ಮೇಲೂ ಹಿಮ ವಿರಲಿಲ್ಲ. ದಕ್ಷಿಣದಲ್ಲಿ ಮಾಂಧಾತಪರ್ವತದ ಮೇಲೆ ದಟ್ಟವಾದ ಹಿಮ ಕವಿದಿತ್ತು. ಅದರ ಎತ್ತರ ೨೫,೩೫೫ ಅಡಿ. ಹಿಂದೆ ಆ ಪರ್ವತದ ಮೇಲೆ ಮಾಂಧಾತರಾಜ ತಪಸ್ಸು ಮಾಡಿಕೊಂಡಿದ್ದನಂತೆ. ಅದಕ್ಕಂತೆ ಆ ಹೆಸರು ಆ ಪರ್ವತಕ್ಕೆ ಬಂದುದು.

ಮಾನಸಸರೋವರದ ಪಶ್ಚಿಮ ದಿಕ್ಕಿಗೆ ಇನ್ನೊಂದು ಸರೋವರ ಕಾಣಿಸಿಕೊಂಡಿತು. ಅದಕ್ಕೆ ರಾವಣಹೃದ್, ರಕ್ಷಾಸ್ತಲ್ ಅಥವಾ ರಾವಣನ ಸರೋವರ ಅಂತ ಹೆಸರು. ಆ ಸರೋವರದ ಹತ್ತಿರವೇ ರಾವಣ ತಪಸ್ಸು ಮಾಡಿಕೊಂಡಿದ್ದನಂತೆ. ಆದ್ದರಿಂದ ಅದಕ್ಕೆ ರಾವಣನ ಸರೋವರ ಅಂತ ಹೆಸರು ಬಂದಿದೆಯಂತೆ. ರಾವಣನ ಸರೋವರಕ್ಕು ಮಾನಸ ಸರೋವರಕ್ಕು ಮಧ್ಯೆ ಏರಿ ಹಾಕಿದಾರೊ ಏನೊ ಎಂಬಂತೆ ಭೂಮಿ ಹಬ್ಬಿದೆ. ಆ ಭೂಮಿಯ ಅಗಲ ಒಂದೂವರೆ ಮೈಲಿಯಿಂದ ಹಿಡಿದು ಆರೂವರೆ ಮೈಲಿಯ ವರೆಗೆ ವ್ಯತ್ಯಾಸವಾಗುತ್ತಿರುತ್ತದೆ. ನೋಡಿ ಹಾಗೆ ಭಗವಂತನ ಮಹಿಮೆಯನ್ನ. ಮಾನಸಸರೋವರದ ನೀರು ಸಿಹಿ, ರಾವಣನ ಸರೋವರದ ನೀರು ಉಪ್ಪು! ಅವುಗಳಿಗಿರುವ ಕನಿಷ್ಠ ಅಂತರ ಕೇವಲ ಒಂದೂವರೆ ಮೈಲಿ ಮಾತ್ರ ಮಾನಸಸರೋವರದ ನೀರು ಅಲ್ಪ ಸ್ವಲ್ಪವಾಗಿ ರಾವಣನ ಸರೋವರಕ್ಕೆ ಹರಿಯುತ್ತಲೇ ಇರುತ್ತದೆ. ಚಳಿಗಾಲ ದಲ್ಲಿ ಈ ಎರಡು ಸರೋವರಗಳೂ ಸಂಪೂರ್ಣವಾಗಿ ನೀರ್ಗಲ್ಲುಗಳಾಗಿ ಬಿಡುವುವಂತೆ. ಆಗ ಒಂದು ಕಡೆಯಿಂದ ಇನ್ನೊಂದು ಕಡೆಗೆ ಸುಲಭವಾಗಿ ನಡೆದುಹೋಗಿಬಿಡಬಹುದಂತೆ. ಇವುಗಳ ಸುತ್ತಲೂ ಇರುವ ಬೆಟ್ಟಗಳು ಹಿಮದಿಂದ ಆವೃತವಾಗಿಬಿಡುವುದಲ್ಲದೆ ಇಡೀ ಈ ಪ್ರದೇಶವೇ ಹಿಮದಿಂದ ಹೊದಿಸಲ್ಪಡುವುದಂತೆ. ಆಗ ಈ ಜಾಗದ ಸೌಂದರ್ಯವನ್ನು ವರ್ಣಿಸಲ ಸದಳವಂತೆ. ಆದರೆ ಆ ದೃಶ್ಯವನ್ನು ನೋಡುವ ಸುಯೋಗ ನಮಗೆಲ್ಲಿ ದೊರೆಯಬೇಕು? ಚಳಿಗಾಲ ಬರಲು ಇನ್ನೂ ನಾಲ್ಕು ತಿಂಗಳು ಹೋಗ ಬೇಕು.

ಆ ಅದ್ಭುತ ಮಾನಸಸರೋವರ, ರಾವಣನ ಸರೋವರ, ಕೈಲಾಸ ಪರ್ವತ ಇವನ್ನೆಲ್ಲಾ ನೋಡುತ್ತ ಮಂತ್ರಮುಗ್ಧರಾಗಿ ಆ ಗುರ್ಲಾ ಕಣಿವೆಯ ಮೇಲೇ ಸ್ವಲ್ಪ ಹೊತ್ತು ಕುಳಿತಿದ್ದೆವು. ಮನಸ್ಸು ಆ ಮೋಹಕ ಜಾಗ ವನ್ನು ಬಿಟ್ಟು ಕದಲಲೊಲ್ಲೆ ಎಂಬುದಾಗಿ ಹೇಳಲಾರಂಭಿಸಿತು. ಆಗ

ಅದಕ್ಕೆ ಹೇಳಿದೆವು: "ನೋಡು ತುಂಟ ಮನಸ್ಸೇ, ಮಾನಸಸರೋವರ ಇನ್ನೂ ಮೂರು ಮೈಲಿ ದೂರದಲ್ಲಿದೆ. ಇಷ್ಟು ದೂರದಿಂದಲೇ ಅದು ಇಷ್ಟು ಸೊಗಸಾಗಿ ಕಾಣುವಾಗ, ಅದರ ಹತ್ತಿರಕ್ಕೆ ಹೋದರೆ ಅದು ಇನ್ನೆಷ್ಟು ಸೊಗಸಾಗಿ ತೋರಬಹುದು. ಬಾ ಹೋಗೋಣ." ಆಗ ಅದು ಒಪ್ಪಿ ಹೊರಡಲು ಅನುವಾಯಿತು. ಅದೂ ಆನಂದದಿಂದ ಹಿಗ್ಗಿ ಹಿಗ್ಗಿ ನಲಿಯುತ್ತ ಹೇಳಿತು: "ಹೌದು, ಹೌದು. ದೂರದಿಂದಲೇ ಮಾನಸ ಸರೋವರ ಇಷ್ಟು ರಮ್ಯವಾಗಿ ತೋರುತ್ತಿರುವಾಗ ಅದರ ಹತ್ತಿರಕ್ಕೆಹೋಗಿ ನೋಡಿದರೆ ಅದು ಇನ್ನೆಷ್ಟು ಅದ್ಭುತವಾದ್ದೇ ಆಗಿ ತೋರಬಹುದು!"

ಮಾನಸಸರೋವರದ ಹತ್ತಿರ ಹತ್ತಿರಕ್ಕೆ ಮುಂದು ಮುಂದುವರಿದಂತೆಲ್ಲ ಒಂದು ವಿಧವಾದ ಸುವಾಸನೆ ಹೆಚ್ಚು ಹೆಚ್ಚಾಗಿ ಗಾಢವಾಗಲಾರಂಭಿಸಿತು. ಆಗ ಯೋಚನೆ ಬಂತು: "ಈ ಸರೋವರದ ಹತ್ತಿರ ಇಂಥ ಸುಮಧುರ ಸುವಾಸನೆ ಬರಲು ಕಾರಣವೇನು? ಪಾರ್ವತೀದೇವಿಯೇನಾದರು ಉಷಃ ಕಾಲದಲ್ಲೇ ಎದ್ದು ಸುಗಂಧ ಮಂಗಳದ್ರವ್ಯಗಳಿಂದ ಸ್ನಾನಮಾಡಿ ನಾನಾ ವಿಧ ಸುಗಂಧ ಫಲಪುಷ್ಪಚಂದನಧೂಪದೀಪಗಳಿಂದ ಕೈಲಾಸಪತಿಯ ಪೂಜೆಯಲ್ಲಿ ತೊಡಗಿರಬಹುದೆ?" ಆ ಭಾವನೆಯೊಡನೆ ಇನ್ನೂ ಏನೇನೊ ಭಾವನೆಗಳು ಬಂದು ಭಾವನಾರಾಜ್ಯದಲ್ಲಿ ಮುಳುಗಿಹೋಗಿಬಿಟ್ಟು ಭಾವಿಸ ಲಾರಂಭಿಸಿದೆ. "ನಾವು ಈಗ ಭೂಮಿಯ ಮೇಲೆ ಇದೇವೆಯೊ ಅಥವಾ ದೇವಲೋಕಕ್ಕೇ ಬಂದುಬಿಟ್ಟದೇವೆಯೊ? ಭೂಮಿಯ ಮೇಲೆ ಇಂಥ ದೇವದುರ್ಲಭ ಪ್ರವೇಶ ಇರಬಲ್ಲದೆ? ಎಂದಿಗೂ ಇಲ್ಲ. ಹಾಗಾದರೆ ಇದು ನಿಜವಾಗಿ ಪುರಾಣಗಳಲ್ಲಿ ವರ್ಣಿತವಾಗಿರುವ ದೇವಲೋಕ ಅಥವಾ ಬ್ರಹ್ಮ ಲೋಕವೇ ಆಗಿರಬಹುದೆ? ಬಹುಶಃ ಈ ರಮ್ಯ ಸರೋವರವನ್ನು ದೇವತೆ ಗಳೆಲ್ಲರೂ ತಮ್ಮ ಜಲಕ್ರೀಡೆಗಾಗಿ ಉಪಯೋಗಿಸುತ್ತಿರಬಹುದೆ? ತ್ರಿಮೂರ್ತಿಗಳು—ಬ್ರಹ್ಮ, ವಿಷ್ಣು, ಮಹೇಶ್ವರ— ಇಲ್ಲಿ ಜಲಕ್ರೀಡೆಯಲ್ಲಿ ತೊಡಗಿರಬಹುದೆ? ಬಹುಶಃ ಸರಸ್ವತಿ ತನ್ನ ವಾಹನ ರಾಜಹಂಸದ ಮೇಲೆ ಕುಳಿತು ವಿಹರಿಸುತ್ತಿರಬಹುದೆ? ನಿತ್ಯ ಸಿದ್ಧರ ಗುಂಪಿಗೆ ಸೇರಿದ ವ್ಯಾಸ, ಶುಕ, ಕಪಿಲ, ನಾರದ ಇವರೇ ಮೊದಲಾದ ಮಹರ್ಷಿಗಳ ಕುಟೀರ ಇದರ ಸುತ್ತಲೂ ಇರಬಹುದೆ? ರಾಮ, ಕೃಷ್ಣ ಇವರೇ ಮೊದಲಾದ ಅವತಾರಪುರುಷರೂ ತಮ್ಮ ತಮ್ಮ ಸಾಂಗೋಪಾಂಗಿಗಳೊಡನೆ ಇಲ್ಲಿ ವಿಹರಿಸುತ್ತಿದ್ದರೂ ಇರಬಹುದೆ? ಶ್ರೀ ಕೃಷ್ಣನ ಸಖರಾದ ಪಂಚಪಾಂಡ

ವರೂ ಇಲ್ಲಿ ಸಿಕ್ಕಬಹುದೆ? ಮಹಾ ಪತಿವ್ರತೆ ದ್ರೌಪದೀದೇವಿಯೂ ಇಲ್ಲೇ ಇರಬಹುದೆ? ಪಾಂಡವರ ವೀರಮಾತೆ ಕುಂತೀದೇವಿಯೂ ಇಲ್ಲಿಗೆ ಬಂದಿರಬಹುದೆ? ಶ್ರೀ ಕೃಷ್ಣ ಅರ್ಜುನನಿಗೆ ದಿವ್ಯ ಚಕ್ಷುಸ್ಸನ್ನು ಕೊಟ್ಟು ತನ್ನ ಸ್ವಸ್ವರೂಪವನ್ನು ತೋರಿಸಿದ ಹಾಗೆ, ನಾವು ಮಾನಸಸರೋವರವನ್ನು ಮುಟ್ಟಿದಾಗ ನಮಗೂ ಕೈಲಾಸಪತಿ ದಿವ್ಯ ಚಕ್ಷುಸ್ಸನ್ನು ಕರುಣಿಸಿ ಇವರೆಲ್ಲರ ದರ್ಶನವನ್ನು ಮಾಡಿಸಿದರೂ ಮಾಡಿಸಬಹುದೆ? ಒಂದು ಪಕ್ಷ ಆತನೇನಾದರು ಹಾಗೆ ಕೃಪೆಮಾಡದಿದ್ದರೆ, ಕೃಪಾಮಯಿ ಪಾರ್ವತೀದೇವಿ ಇದಾಳಲ್ಲ ಆಕೆಯನ್ನು ಹಿಡಿದರಾಯಿತು. ಆಕೆ ನಮ್ಮ ಇಚ್ಛೆಯನ್ನು ಪೂರ್ಣಮಾಡಿ ಕೊಟ್ಟೇಕೊಡುತ್ತಾಳೆ. ಕರುಣೆಯ ಮೂರ್ತಿಯೇ ಅಲ್ಲವೆ ಆಕೆ? ಆಕೆ ನಮ್ಮ ಈ ಇಚ್ಛೆಯನ್ನು ಎಂದಿಗಾದರೂ ಈಡೇರಿಸದೆ ಇರಬಲ್ಲಳೆ? ಎಂದೆಂದಿಗೂ ಇಲ್ಲ." ಹೀಗೆ ಇನ್ನೂ ಏನೇನೊ ಭಾವನೆಗಳಿಂದ ಭಾವ ಪರವಶನಾಗಿ ಮುಂದುವರಿಯುತ್ತಲೇ ಇದ್ದೆ.

ಮಾನಸಸರೋವರದ ಹತ್ತಿರದಿಂದ ಬರುತ್ತಿದ್ದ ಸುವಾಸನೆಯ ಸಂಬಂಧವಾಗಿ ನಾನು ಬಹಳವಾಗಿ ಚಕಿತನಾಗಿರುವುದನ್ನು ನೋಡಿ ನಮ್ಮ ಗೈಡು ನಮ್ಮ ದಾರಿಯ ಎರಡು ಕಡೆಯೂ ಕಾಡೇಕಾಡಾಗಿ ಬೆಳೆದಿದ್ದ ದವನದಂಥ ಒಂದು ಪುಟ್ಟ ಗಿಡವನ್ನು ತಂದು ನನ್ನ ಕೈಗೆ ಕೊಟ್ಟ. ಆಹ! ಏನು ಸುವಾಸನೆ ಆ ಗಿಡದಿಂದ! ಆಗ ಅನಿಸಿತು: "ಆಹಾ, ಭಗವಂತನದು ಎಂಥ ವೈಚಿತ್ರ್ಯ ಸೃಷ್ಟಿ! ಇಂಥ ರಮ್ಯವಾದ ಪ್ರದೇಶಕ್ಕೆ ತಕ್ಕಂತೆ ಹಗಲಿರುಳೆನ್ನದೆ ಮಂಗಳದ್ರವ್ಯಗಳ ಸುವಾಸನೆ ಕೊಡುವ ಈ ಗಿಡಗಳನ್ನು ಇಲ್ಲಿ ಬೆಳೆಸಿದಾನಲ್ಲ! ಇವುಗಳ ಸುವಾಸನೆ ಒಮ್ಮೆಗೇ ಮಾನವನ ಮನಸ್ಸನ್ನು ಭಗವಂತನ ಅಡಿದಾವರೆಗಳ ಕಡೆ ಎಳೆದೆಳೆದುಕೊಂಡುಹೋಗಿ ಬಿಡುತ್ತಿರುವುದಲ್ಲ! ಹೇ ಕೃಪಾಮಯ! ನೀನು ಕೃಪೆಮಾಡದಿದ್ದರೆ ನಾವು ಇಲ್ಲಿಗೆ ಬರಲಾಗುತ್ತಿತ್ತೆ? ಈ ಸ್ವರ್ಗಾನುಭವ ಅನುಭವಿಸಲು ಸಾಧ್ಯವಾಗುತ್ತಿತ್ತೆ? ಎಂದಿಗೂ ಇಲ್ಲ. ಎಂದೆಂದಿಗೂ ಇಲ್ಲ."

ಆ ದವನದ ಕಾಡಿನ ಮಧ್ಯೆ ಮಧ್ಯೆ ಟೀ ಪೊದೆಗಳ ಹಾಗಿರುವ ಒಂದು ವಿಧವಾದ ಮುಳ್ಳಿನ ಪೊದೆಗಳು ಬೆಳೆದಿದ್ದುವು. ಈ ಪ್ರದೇಶದಲ್ಲಿ ಹುಲ್ಲು-ಗಿಲ್ಲು ಏನೂ ಅತಿಯಾಗಿ ಬೆಳೆಯದೆ ಇರುವುದರಿಂದ ಚಮರೀಮೃಗಗಳು ಈ ಮುಳ್ಳುಪೊದೆಯ ಚಿಗುರನ್ನೇ ತಿಂದು ಜೀವಿಸುತ್ತವೆ. ಈ ಮುಳ್ಳಿನ

ಪೊದೆಗಳಲ್ಲಿ ಒಂದು ವಿಶೇಷ ಗುಣ ಇವೆ. ಈ ಪೊದೆ ಮೈಸೂರು ಕಡೆಯ ಹಂಗರುಸೊಪ್ಪಿನ ಹಾಗೆ ಹಸಿಯಾಗಿದ್ದರೂ ಉರಿಯುತ್ತದೆ. ಈ ಮುಳ್ಳಿನ ಪೊದೆಗಳನ್ನೇ ಕತ್ತರಿಸಿ ನಮ್ಮ ಸೇವಕರು ಸೌದೆಯಾಗಿ ಉಪಯೋಗಿಸ ಲಾರಂಭಿಸಿದರು.

ಹಾಗೇ ಮುಂದುವರಿಯುತ್ತಿದ್ದಾಗ ಮೊಲಗಳು ಆ ಕಡೆಯಿಂದ ಈ ಕಡೆಗೆ ಈ ಕಡೆಯಿಂದ ಆ ಕಡೆಗೆ ನೆಗೆದು ಕುಪ್ಪಳಿಸುತ್ತ ಕುಪ್ಪಳಿಸುತ್ತ ಓಡಾಡಲಾರಂಭಿಸಿದುವು ಗಣೇಶನ ವಾಹನ ಇಲಿಗಳೂ ಯಥೇಚ್ಛವಾಗಿ ಇದ್ದುವು. ಇಲ್ಲಿ ತೋಳ, ಹಿಮಚಿರತೆ ಮೊದಲಾದುವೂ ಇವೆಯಂತೆ. ಆದರೆ ಅವು ಯಾವೂ ನಮ್ಮ ಕಣ್ಣಿಗೆ ಬೀಳಲಿಲ್ಲ. ಮುಂದುವರಿಯುತ್ತ ಮುಂದುವರಿಯುತ್ತ ಮಾನಸಸರೋವರದ ಅಲೆಗಳ ಶಬ್ದ ಅಧಿಕಾಧಿಕ ವಾಗುತ್ತಾ ಬಂತು. ಕೊನೆಗೆ ಅದರ ದಡವನ್ನು (ಸುಷುಪ್ನ ಎಂಬ ಜಾಗ) ಮುಟ್ಟಿದಾಗ ನೋಡುತ್ತೇವೆ ಅದರ ಅಲೆಗಳೂ ಸಮುದ್ರದಲೆಗಳ ಪ್ರಮಾಣ ದಲ್ಲೇ ಎದ್ದುಬೀಳುತ್ತವೆ. ಅವು ದಡವನ್ನು ಬಡಿದಾಗ ಹಾರಿ ಬಂದ ತುಂತುರುಗಳು ನಮಗೆಲ್ಲಾ ಪ್ರೋಕ್ಷಣೆ, ಪುಣ್ಯಾವರ್ಚನೆ ಇವೇ ಮೊದಲಾದ ಶುದ್ಧೀಕರಣಗಳನ್ನು ಮಾಡಲಾರಂಭಿಸಿದುವು. ಆ ಸ್ವಚ್ಛ ಸಲಿಲ ಎಷ್ಟು ವಿಶಾಲವಾಗಿ ಹಬ್ಬಿದೆ ಏನು ಕತೆ! ನಾವೆಲ್ಲರೂ ಅದನ್ನೇ ನೆಟ್ಟ ಕಣ್ಣು ಗಳಿಂದ ನೋಡುತ್ತ ಹಾಗೇ ಮೈಮರೆತು ನಿಂತೆವು. ಸ್ವಲ್ಪ ಹೊತ್ತಾದ ನಂತರ ಚೇತರಿಸಿಕೊಂಡು, ಮಾನಸಸರೋವರಕ್ಕೆ ಸಾಷ್ಟಾಂಗಪ್ರಣಾಮ ಮಾಡಿ ಅದರ ಬಳಿಯಲ್ಲೇ ಡೇರೆ-ಗೀರೆ ಹಾಕಲು ಉದ್ಯಮರಾದೆವು.

ಅಪರಾಹ್ಣ ಒಂದು ಘಂಟೆಯ ಸಮಯಕ್ಕೆ ನಮ್ಮ ಪೂಜಾ ಸಾಮ ಗ್ರಿಗಳೊಡನೆ ಮಾನಸಸರೋವರದಲ್ಲಿ ಸ್ನಾನಮಾಡಲು ಹೊರಟೆವು. ಹಿಂದೆ ಜನರ ಬಾಯಿಂದ ಕೇಳಿದ್ದೆ: "ಮಾನಸಸರೋವರದ ನೀರು ಅತ್ಯಂತ ತಣ್ಣಗಿರುತ್ತದೆ. ಅಲ್ಲಿ ಸ್ನಾನಮಾಡಿದ ಕೂಡಲೆ ಬಾಹ್ಯಪ್ರಜ್ಞೆ ತಪ್ಪಿ ಹೋಗಿಬಿಡುತ್ತದೆ. ಪ್ರಜ್ಞೆ ಬರಬೇಕಾದರೆ ಸ್ನಾನಮಾಡಿದವರನ್ನು ಹಪ್ಪಳ ಸುಟ್ಟ ಹಾಗೆ ಬೆಂಕಿ ಮೇಲೆ ಸುಡಬೇಕಾಗುತ್ತದೆ." ಎಂಬುದಾಗಿ. ಆದ್ದರಿಂದ ಬಹಳ ಎಚ್ಚರಿಕೆಯಿಂದ ಸರೋವರಕ್ಕೆ ಕೈಹಾಕಿ ನೋಡಿದೆ. ಆಗ ತೋರಿತು: "ಜನರು ಹೇಳಿದ್ದೆಲ್ಲ ಕೇವಲ ಉತ್ಪ್ರೇಕ್ಷೆ" ಎಂಬು ದಾಗಿ. ಅದರ ನೀರು ತಣ್ಣಗಿರುವುದೇನೊ ನಿಜ, ಆದರೆ ತಡೆಯಲಾರ ದಷ್ಟಲ್ಲ. ಯಾವ ಹೆದರಿಕೆಯೂ ಇಲ್ಲದೆ ಸರೋವರಕ್ಕೆ ಇಳಿದು ಸ್ನಾನ

ಮಾಡಿದೆವು. ಚಳಿಗಾಲದಲ್ಲಿ ಮೈಸೂರು ದೇಶದ ಕೆರೆಗಳಲ್ಲಿ ಪ್ರಾತಃ ಕಾಲವೇ ಎದ್ದು ಹೋಗಿ ಸ್ನಾನಮಾಡಿದರೆ ಎಷ್ಟು ಚಳಿ ಆಗುವುದೊ ಅಷ್ಟು ಮಾತ್ರ ಚಳಿಯಾಯಿತು. ಆ ಸರೋವರದ ನೀರು ಆ ಪ್ರದೇಶಕ್ಕೆ ಮತ್ತು ಆ ಎತ್ತರಕ್ಕೆ ತಕ್ಕಂತೆ ಬಹಳ ತಣ್ಣಗಿರಬೇಕಾದ್ದೇನೊ ವಾಸ್ತವ. ಆದರೆ ಅದರೊಳಗೆ ಅನೇಕ ಬಿಸಿನೀರಿನ ಬುಗ್ಗೆಗಳಿವೆಯಂತೆ. ಆದ್ದರಿಂದ ಅದು ತಡೆಯಲಾರದಷ್ಟು ತಣ್ಣಗಿಲ್ಲ. ಎಲ್ಲಾ ಭಗವಂತನ ನಿಯಾಮಕ. ನಮ್ಮಲ್ಲಿ ಕೆಲವರು ಅದರಲ್ಲಿ ಆನಂದದಿಂದ ಈಜೂ ಆಡಿದೆವು. ಸ್ನಾನಮಾಡಿದ ಒಡನೆ ಅಂಗಾಂಗಗಳೆಲ್ಲಾ ಪುಲಕಿತಗೊಳ್ಳಲಾರಂಭಿಸಿದುವು. ಮನಸ್ಸು ಸ್ವರ್ಗವನ್ನೇ ಮುಟ್ಟಿಬಿಟ್ಟಿತು. ಆನಂದ ಪ್ರತಿಯೊಂದು ರೋಮಕೂಪಗಳಿಂದಲೂ ಹೊರಸೂಸಲಾರಂಭಿಸಿತು. ಇಡೀ ಜಗತ್ತೇ ಆನಂದಮಯವಾಗಿ ಕಂಡಿತು.

ನಮ್ಮ ಪಾರ್ಟಿಯವರು ಸ್ನಾನ ಮುಗಿಸಿದನಂತರ ತಾವು ತಂದಿದ್ದ ಪೂಜಾಸಾಮಗ್ರಿಗಳಿಂದ ಸರೋವರಕ್ಕೆ ಪೂಜೆ ಮಾಡಲಾರಂಭಿಸಿದರು. ನಾನೂ ಸರೋವರಕ್ಕೆ ಪುಷ್ಪಾಂಜಲಿಯನ್ನಿತ್ತೆ. ಆ ಸಂದರ್ಭದಲ್ಲಿ ಪ್ರಾರ್ಥನೆಮಾಡಿದೆ: "ಹೇ ಕೈಲಾಸಪತಿ, ಈ ನಿನ್ನ ಅಮೃತಮಯ ಸರೋವರದಲ್ಲಿ ಸ್ನಾನಮಾಡುವ ಸುಯೋಗ ಎಲ್ಲರಿಗೂ ಸುಲಭದಲ್ಲಿ ದೊರೆಯುವುದೆ? ಇಲ್ಲಿಗೆ ಬರಬೇಕಾದರೆ ಎಷ್ಟೊಂದು ಅನುಕೂಲತೆಗಳು ಬೇಕು ಏನು ಕತೆ! ಬರೀ ಅನುಕೂಲತೆಗಳಿದ್ದರೇ ಸಾಕೆ? ದೈಹಿಕ ಮಾನಸಿಕ ಶಕ್ತಿ ಎಷ್ಟೊಂದಿರಬೇಕು! ಇಲ್ಲದಿದ್ದರೆ ಆ ದುರ್ಗಮ ಜಿಪ್ಪಿ ಮಾಲ್ಪ ರಸ್ತೆಗಳಲ್ಲಿ ನಡೆದುಬರಲಾಗುವುದೆ? ಇವೆಲ್ಲಕ್ಕೂ ಮಿಗಿಲಾಗಿ ನಿನ್ನ ಅಹೇತುಕ ಕೃಪೆ ಬೇಕು. ಅದೊಂದಿಲ್ಲದಿದ್ದರೆ ದಾರಿಯಲ್ಲಿ ಸಿಕ್ಕುವ ಅನೇಕ ಕಂಟಕಗಳಿಂದ ಪಾರಾಗಿ ಬರಲಾಗುವುದೆ? ನಿನ್ನಲ್ಲಿ ಶ್ರದ್ಧಾಭಕ್ತಿ ಇಲ್ಲದಿದ್ದರಂತೂ, ಪ್ರಾಣ ಹೋದರೂ ಚಿಂತೆಯಿಲ್ಲ ಕೈಲಾಸಪತಿಯ ದರ್ಶನ ಮಾಡಿಯೇ ಬರುತ್ತೇವೆ ಎಂಬ ದೃಢಸಂಕಲ್ಪವಿಲ್ಲದಿದ್ದರಂತೂ ಇಲ್ಲಿಗೆ ಬರಲು ಸಾಧ್ಯವೇ? ಖಂಡಿತ ಇಲ್ಲ. ಹೆಜ್ಜೆಹೆಜ್ಜೆಗೂ ಯಾತ್ರಿಕರ ಭಕ್ತಿಯನ್ನು ಒರೆಗಲ್ಲಿಗೆ ಹಚ್ಚಿ ನೋಡಿ ಅಪ್ಪಟ ಭಕ್ತಿಯುಳ್ಳವರನ್ನು ಮಾತ್ರವೇ ನೀನು ಇಲ್ಲಿಗೆ ಬಿಟ್ಟುಕೊಡುತ್ತಾ ಇದೀಯೆ. ಭಕ್ತಪರಾ ಧೀನ ಎಂಬ ಹೆಸರನ್ನು ನೀನು ಗಳಿಸಿಕೊಂಡಿದೀಯೆ. ಆದ್ದರಿಂದ ಈಗ ನೀನು ನನ್ನ ಈ ಇಚ್ಛೆಯನ್ನು ಈಡೇರಿಸಿ ಕೊಟ್ಟೇಕೊಡಬೇಕು. ಇಲ್ಲದಿದ್ದರೆ ನಿನ್ನ ಹೆಸರಿಗೆ ಕಳಂಕ ಬಂದುಬಿಡುತ್ತದೆ ನೋಡಿಕೊ. ನೀನು

ನನ್ನ ತಲೆಯಮೇಲೆ ಏನೇನು ಪುಣ್ಯಗಳ ಹೊರೆ ಹೊರಿಸಲು ಇಚ್ಛಿಸಿರುವೆಯೊ ಅವನ್ನೆಲ್ಲಾ ನಾನು ಈ ಜಗತ್ತಿನಲ್ಲಿ ಕಣ್ಣು ತೆರೆದಂದಿನಿಂದ ಯಾರಾರು ನನ್ನ ದೃಷ್ಟಿಗೆ ಬಿದ್ದಿದ್ದಾರೊ ಅವರೆಲ್ಲರಿಗೂ ಹಂಚು. ಅವರೆಲ್ಲರೂ ಒಂದಲ್ಲ ಒಂದು ದಿನ ಇಲ್ಲಿಗೆ ಬರಲಾಗುವಂತೆ ಸುಯೋಗ ಕಲ್ಪಿಸಿಕೊಡು. ಅದೇ ಪುಣ್ಯಗಳನ್ನ ಮುಂದೆ ನನ್ನ ಕಣ್ಣಿಗೆ ಬೀಳಬಹುದಾದವರಿಗೂ ಹಂಚು. ಅವರಿಗೂ ಇಲ್ಲಿಗೆ ಬರಲಾಗುವ ಸುಯೋಗ ಕಲ್ಪಿಸಿಕೊಡು. ಅದೇ ಪುಣ್ಯಗಳನ್ನ, ಕೇವಲ ಮಾನವಜೀವಿಗಳಿಗೇ ಏಕೆ, ಸಕಲ ಜೀವರಾಶಿಗಳಿಗೂ ಹಂಚು. ಅವೂ ಆದಷ್ಟು ಬೇಗ ಮಾನವ ಜನ್ಮ ಪಡೆದು ಬೇಗ ಇಲ್ಲಿಗೆ ಬರುವಂತಾಗಲಿ. ಇಂಥ ಅಮೃತಪೂರಿತ ಆನಂದವನ್ನು ನಾನೊಬ್ಬನೇ ಹೇಗೆ ಸವಿಯಲಿ? ಎಲ್ಲರೂ ಅದರಲ್ಲಿ ಭಾಗಿಗಳಾಗುವಂತೆ ಮಾಡು." ಬಳಿಕ ಸ್ವಲ್ಪ ಹೊತ್ತು ಅದರ ದಡದಲ್ಲಿ ಧ್ಯಾನದಲ್ಲಿ ಕುಳಿತಿದ್ದೆವು. ಆಗ ಮನಸ್ಸು ನಮ್ಮನ್ನು ಹೇಳದೆ ಕೇಳದೆ ಆನಂದಸಾಗರದಲ್ಲಿ ಮುಳುಗಿ ತೇಲಿ ಸುಮ್ಮನೆ ಈಜಾಡುತ್ತಿತ್ತು.

ಇಲ್ಲಿ ಗಾಳಿ ವಿಪರೀತ. ನಮ್ಮನ್ನೇ ಸ್ವರ್ಗಕ್ಕೆ ಹೊತ್ತುಕೊಂಡು ಹೋಗಿಬಿಡುವ ಹಾಗೆ ಬೀಸುತ್ತಿತ್ತು. ಅಂಥಾದ್ದರಲ್ಲಿ ಇನ್ನು ಡೇರೆ-ಗೀರೆಗಳ ಪಾಡು ಕೇಳಬೇಕೆ! ಆದರೆ ಅವಕ್ಕೆ ಬಲವಾದ ಗೂಟ ಹಾಕಿ ಚೆನ್ನಾಗಿ ಬಿಗಿದಿದ್ದೆವು. ಡೇರೆ ಬೇಕಾದರೆ ಹರಿದು ಹೋಗಬೇಕೇ ವಿನಾ ಹಾರಿಹೋಗುವಂತಿರಲಿಲ್ಲ. ಭಗವಂತನ ಕೃಪೆಯಿಂದ ಅವು ಹರಿದು ಹೋಗದೆ ಗಾಳಿಯ ಜೋರನ್ನೆಲ್ಲಾ ತಡೆದುಕೊಂಡವು.

ವಿಶ್ರಾಂತಿ-ಗಿಶ್ರಾಂತಿ ಪಡೆದು ನೋಡುತ್ತೇನೆ ಆಗಲೇ ಸಾಯಂಕಾಲ ಐದಾಗಿಬಿಟ್ಟದೆ. ಓವರ್‌ಕೋಟು ಹಾಕಿಕೊಂಡು ಮಾನಸಸರೋವರದ ದಡದಲ್ಲಿ ಸ್ವಲ್ಪ ಹೊತ್ತು ಸುತ್ತಾಡಲು ಹೊರಟೆ. ಅಲ್ಲಲ್ಲಿ ಬಹಳ ಸುಂದರವಾದ ವಿವಿಧ ಬಣ್ಣಗಳ ವಿವಿಧ ಆಕಾರಗಳ ಸಣ್ಣ ಸಣ್ಣ ಕಲ್ಲುಗಳು ಯಥೇಚ್ಛವಾಗಿ ಬಿದ್ದಿದ್ದುವು. ಭಾರತಕ್ಕೆ ಹಿಂದಿರುಗಿದ ಮೇಲೆ ಭಕ್ತರಿಗೆ ಹಂಚಲೋಸುಗ ಒಂದು ಕಾಸಿನಷ್ಟಗಲದ, ಮೂರು ಕಾಸಿನಷ್ಟಗಲದ ಕಲ್ಲುಗಳನ್ನು ಆಯಲು ಶುರುಮಾಡಿದೆ. ಈ ಕಲ್ಲು ಬಿಡುವುದು ಹೇಗೆ, ಆ ಕಲ್ಲು ಬಿಡುವುದು ಹೇಗೆ ಎಂದು ಆಯುತ್ತ ಆಯುತ್ತಲೇ ಒಂದು ಸೇರಿನ ತೂಕದಷ್ಟಾಯಿತು. ಇನ್ನೂ ಹೆಚ್ಚಿಗೆಯಾಗಿ ಆಯ್ದು ತರಬಹುದಾಗಿತ್ತು. ಆದರೆ ಹೊರುವವರಾರು?

ಹಾಗೇ ಪಶ್ಚಿಮದ ಕಡೆಗೆ ಮುಂದುವರಿದಾಗ ಸರೋವರದಲ್ಲಿ ಸಹಸ್ರ ಸಹಸ್ರ ಪಕ್ಷಿಗಳು ಈಜಾಡುತ್ತಿರುವುದು ಕಣ್ಣಿಗೆ ಬಿತ್ತು. ಕೆಲವು ದಡದ ಮೇಲೂ ಕುಳಿತಿದ್ದುವು. ರಾಜಹಂಸಗಳು ಇಲ್ಲಿ ಯಥೇಚ್ಛವಾಗಿ ಇವೆ ಎಂಬುದಾಗಿ ನಾನು ಕೇಳಿದ್ದೆ. ಆದರೆ ಇವು ನಾನು ಮೃಗಾಲಯದಲ್ಲಿ ನೋಡಿರುವ ಹಂಸಪಕ್ಷಿಗಳಂತಿರಲಿಲ್ಲ. ಮೈಸೂರು ಕಡೆ ಕಾಣಬರುವ ದೊಡ್ಡ ಬಿಳಿ ಹದ್ದಿನಂತಿದ್ದುವು. ಕೊಕ್ಕು ಅದೇ ರೀತಿಯಾಗಿ ಚೂಪಾಗಿಯೂ ಹಳದಿ ಬಣ್ಣದ್ದಾಗಿಯೂ ಇತ್ತು. ಕಾಲೂ ಹಳದಿ ಬಣ್ಣವೇ. ಪಾದ ಈಜುವ ಹಕ್ಕಿಗಳಿಗನುಗುಣವಾಗಿ ಜಾಲಪಾದವಾಗಿತ್ತು. ಇನ್ನೂ ಸ್ವಲ್ಪ ದೂರದಲ್ಲಿ ಎತ್ತರವಾಗಿರುವ ಕೆಲವು ಕೊಕ್ಕರೆಗಳನ್ನೂ ನೋಡಿದೆ. ಅವಕ್ಕೆ ಕಪ್ಪುಗರಿಗಳಿರುವಂತೆ ತೋರಿಬಂತು.

ಸ್ವಲ್ಪ ದೂರದಲ್ಲಿ ಟಿಬೆಟ್ಟಿಯನ್ನರು ಒಂದು ಟೆಂಟು ಹಾಕಿಕೊಂಡಿದ್ದರು. ಅದು ಕಪ್ಪಗೆ ಕಂಡಿತು. ಚಮರೀಮೃಗದ ಕೂದಲಿನಿಂದ ಅದನ್ನು ನೆಯ್ದಿದ್ದರು. ಅದರ ಸುತ್ತಮುತ್ತಲೂ ಅನೇಕ ಚಮರೀಮೃಗಗಳು ಮೇಯುತ್ತಿದ್ದುವು. ಅವನ್ನು ಕಾಯಲು ಎರಡು ನಾಯಿಗಳು ಹತ್ತಿರ ನಿಂತಿದ್ದುವು. ಆ ನಾಯಿಗಳು ಅಷ್ಟು ಭಾರಿಯವು, ಸಿಂಹದ ಮರಿಗಳಂತೇ ಕಂಡುವು. ಅವುಗಳ ನೋಟ ಬಹಳ ಭಯಂಕರವಾಗಿತ್ತು. ಅವುಗಳ ಬಗುಳುವಿಕೆಯಂತೂ ಹೃದಯವನ್ನು ಸುಮ್ಮನೆ ಕಂಪಿಸಲಾರಂಭಿಸಿತು. ಸಿಡಿಲು ಬಡಿಯುತ್ತಿರುವುದೊ ಏನೊ ಎಂಬಂತೆ ಅನುಭವವಾಯಿತು. ಅವು ಬಹಳ ಕ್ರೂರಮೃಗಗಳು ಅಂತ ಜನರ ಬಾಯಿಂದ ಕೇಳಿದ್ದೆ. ಆಗ ಶ್ರೀ ರಾಮಕೃಷ್ಣ ಪರಮಹಂಸರು ತಮ್ಮ ವಚನವೇದದಲ್ಲಿ ಹೇಳಿರುವ ಒಂದು ಉಪದೇಶ ಜ್ಞಾಪಕಕ್ಕೆ ಬಂತು. ಅದರಲ್ಲಿ ಒಂದು ಕಡೆ ಹೇಳಿದಾರೆ: “ಈ ಒಂದೆರಡು ವಿಚಾರಗಳಲ್ಲಿ ಸಾವಧಾನದಿಂದಿರಬೇಕು. ಒಂದನೆಯದಾಗಿ ದೊಡ್ಡ ಮನುಷ್ಯ. ಆತನಿಗೆ ದುಡ್ಡು ಕಾಸು ಆಳು ಕಾಳು ಯಥೇಚ್ಛ. ಮನಸ್ಸು ಮಾಡಿದರೆ ನಿನಗೆ ಅನಿಷ್ಟ ತರಬಲ್ಲ. ಅಂಥವನೊಡನೆ ಎಚ್ಚರಿಕೆಯಿಂದ ಮಾತು ಕತೆ ಆಡಬೇಕು. ಆತ ಹೇಳುವುದಕ್ಕೆಲ್ಲ ‘ಹ್ಞೂ’ ಗುಟ್ಟಬೇಕಾಗಿಬರಬಹುದು. ಎರಡನೆಯದಾಗಿ ನಾಯಿ. ಅದು ಅಟ್ಟಿಸಿಕೊಂಡು ಬಂದಾಗ ಅಥವಾ ಬಗುಳುವಾಗ ಓಡಿಹೋಗದೆ ಲೊಚಗುಟ್ಟಿ ಮಾತಾಡಿಸಿ ಸಮಾಧಾನಪಡಿಸಬೇಕು. ಮೂರನೆಯದಾಗಿ ಗೂಳಿ. ಅದು ತಿವಿಯಲು ಬಂದರೆ ಆಗಲೂ ಹೊ! ಹೊ! ಹೊ! ಎಂದು ಹೇಳಿ ಅದನ್ನು ಸುಮ್ಮ

ನಿರಿಸಬೇಕು. ನಾಲ್ಕನೆಯದಾಗಿ ಕುಡುಕ. ನೀನೇನಾದರೂ ಆತನನ್ನು ರೇಗಿಸಿಬಿಟ್ಟರೆ, ನೀನು ಹಾಗೆ ನೀನು ಹೀಗೆ ಎಂದು ನಿನ್ನ ಹದಿನಾಲ್ಕು ವಂಶಗಳ ಪಾರಂಪರ್ಯವನ್ನೆಲ್ಲಾ ಹಿಡಿದು ಬೈದುಬಿಡುತ್ತಾನೆ. ಅವನಿಗೆ ಹೇಳಬೇಕು: 'ಏನಣ್ಣಾ! ಹೇಗಿದೀಯೆ?' ಆಗ ಅವನಿಗೆ ತುಂಬಾ ಆನಂದ. ನಿನ್ನ ಹತ್ತಿರ ಕುಳಿತು ಹುಕ್ಕ ಸೇದುತ್ತಾನೆ." ಒಡನೆಯೆ ನಾನೂ ಆ ನಾಯಿಗಳಿಗೆ ದೂರದಿಂದಲೇ ನಮಸ್ಕಾರ ಹಾಕಿ ಹಿಂದಿರುಗಿಬಿಟ್ಟೆ.

ಮಾನಸಸರೋವರ ರಾತ್ರಿಯಾಗುತ್ತ ಆಗುತ್ತ ಶಾಂತವಾಗಲಾರಂಭಿಸಿತು. ಒಳ್ಳೆ ಕಂಬಳಿಗಳನ್ನು ಹೊದ್ದು ಕೈಗೆ ಕಾಲಿಗೆ ತಲೆಗೆ ಎಲ್ಲಕ್ಕೂ ಇದ್ದಬದ್ದ ಉಣ್ಣೆ ಒಟ್ಟೆಗಳನ್ನು ಸುತ್ತಿ ಆ ಮಾನಸಸರೋವರದ ದಡದಲ್ಲಿ ಕುಳಿತು, ಅದನ್ನೇ ಏಕದೃಷ್ಟಿಯಿಂದ ನಮ್ಮ ಹೃದಯ ತಣಿದು ತೃಪ್ತಿಯಾಗುವವರೆಗೆ ನೋಡುತ್ತಿದ್ದು, ಆ ಬಳಿಕ ಬಹಳ ಹೊತ್ತಿನವರೆಗೆ ಜಪ, ತಪ, ಪ್ರಾರ್ಥನೆ, ಧ್ಯಾನ ಇವುಗಳಲ್ಲೇ ತೊಡಗಿದ್ದೆವು. ಈಗಲೂ ಸಕಲ ಜೀವರಾಶಿಗಳ ಶ್ರೇಯಸ್ಸಿಗಾಗಿ ಭಗವಂತನಲ್ಲಿ ಹೃತ್ಪೂರ್ವಕ ಪ್ರಾರ್ಥನೆ ಸಲ್ಲಿಸಿದೆವು.

ಅನಂತರ ಊಟೋಪಚಾರಗಳಿಗೆ ಕುಳಿತೆವು. ಇಂದು ಆ ಟಿಬೆಟ್ಟಿಯನ್ನರ ಟೆಂಟಿನಿಂದ ಚಮರೀಮೃಗದ ಮೊಸರು ಕೊಂಡುಕೊಂಡು ಬಂದಿದ್ದೆವು. ಆಹ! ಎಷ್ಟು ಸಿಹಿಯಾಗಿ, ಎಷ್ಟು ಸ್ವಾದವಾಗಿ, ಎಷ್ಟು ಗಟ್ಟಿಯಾಗಿ ಇತ್ತು ಆ ಮೊಸರು! ಚಾಕು ಹಾಕಿ ಕತ್ತರಿಸಬೇಕಾಗುವಂತಿತ್ತು. ಅದನ್ನು ಹಾಕಿಕೊಂಡು ಒಂದು ಸೇರು ಅಕ್ಕಿ ಅನ್ನವನ್ನೇ ತಿಂದುಬಿಡಲೇ ಅಂತ ಅನಿಸಲಾರಂಭಿಸಿತು. ಊಟ-ಗೀಟ ಮುಗಿದನಂತರ ನಮ್ಮ ನಮ್ಮ ಡೇರೆಗಳಿಗೆ ಹೋಗಿ ಮಲಗಿಕೊಂಡೆವು. ಬೆಳಗಿನಿಂದಲೂ ಭಾವನಾರಾಜ್ಯದಲ್ಲೇ ಮುಳುಗಿಹೋಗಿದ್ದ ಮನಸ್ಸಿಗೆ ಸುಲಭವಾಗಿ ನಿದ್ದೆ ಹತ್ತುವುದೆ? ಮಾನಸಸರೋವರದ ಸೌಂದರ್ಯವನ್ನೇ ನೆನಸಿಕೊಂಡು ನೆನಸಿಕೊಂಡು ಹಾಸಿಗೆ ಮೇಲೆ ಹೊರಳಾಡಲಾರಂಭಿಸಿದೆವು.

ಹಾಗೇ ಮಲಗಿರುವಾಗ ನನ್ನ ಟೆಂಟಿನಲ್ಲಿ ಏನೇನೊ ಶಬ್ದ ಕೇಳಿಬರಲಾರಂಭಿಸಿತು. ಟಾರ್ಚು ಹಾಕಿ ನೋಡುತ್ತೇನೆ ಗಣೇಶನ ವಾಹನ ಬಂದು ಹಾಸಿಗೆ ಬಟ್ಟೆಬರೆ ಎಲ್ಲವನ್ನೂ ಪರೀಕ್ಷೆಮಾಡಿ ನೋಡುತ್ತಿವೆ. ಆಗ

ನಾನು ಅವಕ್ಕೆ ಹೇಳಿದೆ: "ನಾನು ನೀಲಗಿರಿಯಿಂದ ಹೊರಟಾಗ ನಿಮ್ಮ ಯೋಚನೆಯೇ ನನಗೆ ಬರಲಿಲ್ಲ. ದಯವಿಟ್ಟು ಕ್ಷಮಿಸಿ. ನಿಮಗೆ ತಿಂಡಿ ತೀರ್ಥ ಏನೂ ತಂದಿಲ್ಲ. ದಯವಿಟ್ಟು ನೀವು ಅಡಿಗೆ ಟೆಂಟಿಗೆ ಹೋಗಿ. ಏನಾದರೂ ನಿಮಗೆ ಅಲ್ಲಿ ದೊರೆತರೂ ದೊರೆಯಬಹುದು." ಅನಂತರ ಅವೆಲ್ಲವನ್ನೂ ಹೊರಕ್ಕೆ ಅಟ್ಟಿ ನಿದ್ರಿಸಲು ಆರಂಭಿಸಿದೆ.



ತಾ|| ೨-೭-೧೯೫೧.



ಗುರ್ಲಾ ಕಣಿವೆಯಿಂದ ಮಾನಸಸರೋವರ.

ತಾ|| ೨-೭-೧೯೫೧.



ಮಾಂಧಾತಪರ್ವತದ ಹತ್ತಿರ ಚಮುರೀಮೃಗಗಳು.

ತಾ|| ೩-೭-೧೯೫೧.



ತುಘುಪ್ಪುವಿನ ಹತ್ತಿರ ಮಾನಸಸರೋವರದಲ್ಲಿ ಸೂರ್ಯೋದಯ.

ತಾ|| ೪-೭-೧೯೫೧



ಮಾಲಧದ ಹತ್ತಿರ ಮಾನಸಸರೋವರದಲ್ಲಿ ಸೂರ್ಯೋದಯ.

೬

# ಮಾನಸಸರೋವರದಿಂದ ಕೈಲಾಸಗಿರಿಗೆ

## ಪ್ರಯಾಣ ತಾ|| ೩-೬-೧೯೫೧ ರಿಂದ ೪-೭-೧೯೫೧ ರ ವರೆಗೆ.

## ದೂರ ೧೯ ಮೈಲಿ.

ಬೆಳಗಿನ ಜಾವ ಎಚ್ಚರವಾದಾಗ ಘಂಟೆ ನಾಲ್ಕು. ಹೊರಗಡೆ ಬಂದು ನೋಡುತ್ತೇನೆ ನಭೋಮಂಡಲ ನಕ್ಷತ್ರಖಚಿತವಾಗಿದೆ. ಚಂದ್ರ ಅಸ್ತ ನಾಗಿದಾನೆ. ಪ್ರಕೃತಿದೇವಿ ಶಾಂತಳಾಗಿದಾಳೆ. ಮಾನಸಸರೋವರವೂ ಪ್ರಶಾಂತವಾಗಿದೆ. ಉಳಿದ ಟೆಂಟುಗಳಿಂದ ಇನ್ನೂ ಯಾರೂ ಹೊರಕ್ಕೆ ಬಂದಿಲ್ಲ. ಒಂದು ಒಳ್ಳೆ ಕಂಬಳಿ ಹೊದ್ದುಕೊಂಡು ಸರೋವರದ ದಡದಲ್ಲಿ ಧ್ಯಾನಕ್ಕೆ ಕುಳಿತೆ. ಸ್ವಲ್ಪ ಹೊತ್ತಿನಲ್ಲೆ ಕತ್ತಲೆ ಹೋಗಿ ಮುಂಬೆಳಕು ಬರಲಾರಂಭಿಸಿತು. ಪೂರ್ವ ದಿಗಂತ ಕೆಂಪೇರಲಾರಂಭಿಸಿತು. ಮಾನಸ ಸರೋವರ ಅದನ್ನು ಪ್ರತಿಬಿಂಬಿಸಲಾರಂಭಿಸಿತು. ಇಂದು ಭಗವಂತನ ಕೃಪೆಯಿಂದ ಬಹಳ ಸುಂದರವಾದ ಮೋಡಗಳು ಪೂರ್ವ ದಿಕ್ಕಿನಲ್ಲಿ ಹರಡಿ ಕೊಂಡಿದ್ದುವು. ಅವೆಲ್ಲಾ ಕ್ರಮಕ್ರಮೇಣ ಹೊಂಬಣ್ಣದುಡಿಗೆ ಉಡಲಾ ರಂಭಿಸಿದುವು. ಇಡೀ ಪೂರ್ವ ದಿಗಂತವೇ ಹೊಂಬಣ್ಣದಿಂದ ಕಂಗೊಳಿಸ ಲಾರಂಭಿಸಿತು. ಪ್ರಕೃತಿದೇವಿ ಅರುಣೋದಯದ ಮಂಗಳಾರತಿಗೆ ಸಕಲ ಸಿದ್ಧತೆಗಳನ್ನು ಮಾಡಿಕೊಳ್ಳುತ್ತಿರುವಂತೆ ತೋರಿಬಂತು ಕ್ರಮೇಣ ಸೂರ್ಯ ದಿಗಂತದಲ್ಲಿದ್ದ ಗಿರಿಶಿಖರಗಳ ಸಂದಿಗೊಂದಿಗಳಲ್ಲಿ ಮೇಲಕ್ಕೆ ಬರಲೊ ಬೇಡವೊ ಅಂತ ಇಣಿಕಿ ನೋಡಲಾರಂಭಿಸಿದ. ತನ್ನ ಎದುರಿಗೆ ದುಷ್ಟರಾರೂ ಕುಳಿತಿಲ್ಲದಿರುವುದನ್ನು ನೋಡಿ ಧೈರ್ಯದಿಂದ ಆ ಶಿಖರಗಳ ತುದಿಗೆ ಹತ್ತಿಯೇ ಬಿಟ್ಟ. ಅನಂತರ ತನ್ನ ಪೂರ್ಣ ಪ್ರಕಾಶದಿಂದ ಇಡೀ ಮಾನಸಸರೋವರವನ್ನು ಆವರಿಸಿದ. ಸೂರ್ಯನ ಪ್ರಕಾಶದಿಂದ ಪುಲಕಿತ ವಾದ ಮಾನಸಸರೋವರ ಒಡನೆ ಚಿಕ್ಕ ಪುಟ್ಟ ಅಲೆಗಳನ್ನು ಎಬ್ಬಿಸಿ ಆನಂದ ದಿಂದ ನಲಿಯಲಾರಂಭಿಸಿತು. ಕ್ರಮಕ್ರಮೇಣ ದೊಡ್ಡ ದೊಡ್ಡ ಅಲೆ

ಗಳಿಂದ ವಿವಿಧ ನಾಟ್ಯಗಳನ್ನು ಆಡಲು ಆರಂಭಿಸಿತು. ಆತನಿಗೆ ಜಯಘೋಷ ಮಾಡಲಾರಂಭಿಸಿತು. "ಇಡೀ ವಿಶ್ವವೇ ಪವಿತ್ರವಾಗಲಿ" ಅಂತ ಹೇಳಲಾರಂಭಿಸಿತು. "ಅಜ್ಞಾನ ತಿಮಿರ ನಾಶವಾಗಲಿ'' ಎಂದು ಹರಸಿತು. "ಜಯ ಶಿವ! ಜಯ ಶಿವ!" ಎಂದು ಆರತಿ ಬೆಳಗಲಾರಂಭಿಸಿತು. "ಸಕಲ ಜೀವರಾಶಿಗಳಿಗೂ ಭಗವಂತನ ಸಾಕ್ಷಾತ್ಕಾರ ದೊರಕಲಿ" ಎಂದು ಹಾಡಲಾರಂಭಿಸಿತು. ಇಡೀ ಮಾನವಕೋಟಿಯನ್ನೇ ಸಂಬೋಧಿಸಿ ಉಪದೇಶವೀಯಲಾರಂಭಿಸಿತು: "ಎಲೋ ಮಾನವ ಜೀವಿಗಳಿರಾ, ಮರೆಯದಿರಿ! ಮರೆಯದಿರಿ! ನೀವು ಸಾಕ್ಷಾತ್ ಪರಬ್ರಹ್ಮಸ್ವರೂಪರೇ ಎಂಬುದನ್ನ. ಮರೆಯದಿರಿ! ಮರೆಯದಿರಿ! ನೀವು ಸಾಕ್ಷಾತ್ ಸಚ್ಚಿದಾನಂದಸ್ವರೂಪರೇ ಎಂಬುದನ್ನ. ಎಂದೆಂದಿಗೂ ಮರೆಯದಿರಿ! ನಿಮ್ಮ ಮಾನವ ಜನ್ಮ ಬ್ರಹ್ಮಾನುಭವ ಪಡೆಯಲೋಸುಗವೇ ವಿನಾ ವಿಷಯಾನುಭವ ಹೊಂದಲೋಸುಗವಲ್ಲ ಎಂಬುದನ್ನ. ಸಮಸ್ತ ಶಕ್ತಿಯೂ ನಿಮ್ಮಲ್ಲೇ ತುಂಬಿದೆ; ನೀವು ಏನುಬೇಕಾದರೆ ಅದು ಆಗಬಲ್ಲಿರಿ; ನೀವು ಪಡುವ ಸಕಲ ದುಃಖದುರಿತಗಳಿಗೆಲ್ಲಾ ನೀವೇ ಕಾರಣರು; ನಿಮ್ಮ ಸಂಸಾರ ಬಂಧನಕ್ಕೂ ನೀವೇ ಕಾರಣರು; ನೀವು ಪಡುವ ಸಕಲ ಆನಂದಕ್ಕೂ ನೀವೇ ಕಾರಣರು ಎಂಬುದನ್ನ ಸ್ವಪ್ನದಲ್ಲೂ ಮರೆಯಬೇಡಿ. ಏಳಿ! ಎಚ್ಚರಗೊಳ್ಳಿ! ನಿಮ್ಮ ಆತ್ಮಪೌರುಷವನ್ನು ವ್ಯಕ್ತಗೊಳಿಸಿ! ಹಾಕಿ ವಜ್ರಾಘಾತವನ್ನ ನಿಮ್ಮ ತಿಮಿರಾಂಧಕಾರಕ್ಕೆ! ಎಂದೆಂದಿಗೂ ಹೇಡಿತನವನ್ನು ಪ್ರದರ್ಶಿಸಬೇಡಿ. ಸಿಂಹಪರಾಕ್ರಮಿಗಳಂತೆ ಬಾಳಿ ಬದುಕಿ. ಸಕಲ ಜೀವರಾಶಿಗಳ ಹೃದಯಕ್ಕೂ ಆನಂದ, ಉತ್ಸಾಹ, ಸ್ಫೂರ್ತಿ ಇವನ್ನು ತುಂಬಿ. ನೀವೂ ಆತ್ಮಜ್ಞಾನ ಪಡೆದು ಇತರರಿಗೂ ಆತ್ಮಜ್ಞಾನ ದೊರಕಿಸಿಕೊಡಿ. ನೀವೂ ಬ್ರಹ್ಮಜ್ಞರಾಗಿ ಇತರರೂ ಬ್ರಹ್ಮಜ್ಞರಾಗಲು ಸಹಾಯ ನೀಡಿ." ಆಗ ಘಂಟೆ ಐದೂವರೆ. ಆ ದಿವ್ಯ ದೃಶ್ಯವನ್ನು ನೆಟ್ಟ ಕಣ್ಣುಗಳಿಂದಲೇ ನೋಡುತ್ತ, ಆ ದಿವ್ಯ ಉಪದೇಶವನ್ನು ಮನನಮಾಡುತ್ತಲೇ ಆರು ಘಂಟೆಯವರೆಗೆ ಕುಳಿತಿದ್ದು ಎದ್ದೆ. ಬಳಿಕ ದಕ್ಷಿಣದ ಕಡೆಗೆ ನೋಡುತ್ತೇನೆ ಮಾಂಧಾತಪರ್ವತ ದೇದೀಪ್ಯಮಾನವಾಗಿ ಪ್ರಜ್ವಲಿಸುತ್ತಿದೆ. ಸೂರ್ಯನ ಕಿರಣ ಹಿಮಾಚ್ಛಾದಿತ ಆ ಮಾಂಧಾತಪರ್ವತದ ಮೇಲೆ

ಬಿದ್ದು ಅದಕ್ಕೆ ಒಂದು ಅದ್ಭುತ ಶೋಭೆಯನ್ನು ಕೊಟ್ಟಿದೆ. ಅದನ್ನೂ ಸ್ವಲ್ಪ ಹೊತ್ತು ಹಾಗೇ ನೋಡುತ್ತ ನಿಂತೆ. ಬಳಿಕ ಮಾನಸಸರೋವರಕ್ಕೆ ಸಾಷ್ಟಾಂಗಪ್ರಣಾಮಮಾಡಿ ಸನ್ನ ಡೇರೆಗೆ ಹಿಂದಿರುಗಿದೆ.

## ಸುಷುಪ್ನವಿನಿಂದ ಮಾಲಥಕ್ಕೆ

**೧೪,೯೦೦ ಅಡಿ ಎತ್ತರದಿಂದ ಅಷ್ಟೇ ಎತ್ತರಕ್ಕೆ. ದೂರ ೧೧ ಮೈಲಿ.**

**ಪ್ರಯಾಣ ಬೆಳಗಿನ ೭ ರಿಂದ ಅಪರಾಹ್ನ ೧ ರ ವರೆಗೆ.**

**ತಾ|| ೩-೭-'೫೧ ಮಂಗಳವಾರ.**

ಮಾಲಥ ಎಂಬುದು ಮಾನಸಸರೋವರದ ಪಶ್ಚಿಮ ದಡದಲ್ಲಿರುವ ಒಂದು ಜಾಗ ಇಂದಿನ ಪ್ರಯಾಣ ಮಾನಸಸರೋವರದ ಪಶ್ಚಿಮ ದಡ ದಲ್ಲೇ. ಸ್ವಲ್ಪ ದೂರ ಮುಂದುವರಿಯುವವರೆಗೆ ಕೈಲಾಸಪರ್ವತ ಕಾಣಿಸಿ ಕೊಳ್ಳುತ್ತಿದ್ದು ಬಳಿಕ ಮರೆಯಾಯ್ತು. ಆದರೆ ಆ ಹಿಮಾವೃತ ಮಾಂಧಾತ ಪರ್ವತ ಇಂದಿನ ದಾರಿಯ ಉದ್ದಕ್ಕೂ ವಿವಿಧ ಮನೋಹರ ಆಕಾರಗಳನ್ನು ತಾಳುತ್ತ ಕಾಣಿಸಿಕೊಳ್ಳುತ್ತಲೇ ಇತ್ತು. ಅದರ ಪ್ರತಿಬಿಂಬವಂತೂ ಮಾನಸಸರೋವರದಲ್ಲಿ ಬಹಳ ಬಹಳ ರಮ್ಯವಾಗಿ ಬೀಳುತ್ತಿತ್ತು. ಆ ಮನೋಹರ ದೃಶ್ಯವನ್ನು ನೋಡಲೋಸುಗವೇ ನಾನು ಆಗಾಗ ಹಿಂದಿರುಗಿನೋಡುತ್ತಲೇ ಮುಂದುವರಿಯುತ್ತಿದ್ದೆ. ನಾನು ನಿನ್ನೆ ವರ್ಣಿಸಿದ ಹಕ್ಕಿಗಳು ಯಥೇಚ್ಛವಾಗಿ ಸರೋವರದಲ್ಲಿ ತುಂಬಿಕೊಂಡು ಈಜಾಡಿ ನಲಿದಾಡುತ್ತಿರುವ ದೃಶ್ಯವನ್ನು ಇಂದಿನ ದಾರಿಯ ಉದ್ದಕ್ಕೂ ನೋಡ ಬಹುದಾಗಿತ್ತು. ಸರೋವರದ ಅಲೆಯ ಪೆಟ್ಟಿಗೆ ಸಿಕ್ಕಿಬಿದ್ದ ಕೆಲವು ಮೀನು ಗಳು ಅಲ್ಲಲ್ಲಿ ದಡದ ಮೇಲೆ ಸತ್ತುಬಿದ್ದಿದ್ದುವು. ನಮ್ಮ ಕೂಲಿಗಳು ಅದ ನ್ನೆಲ್ಲಾ ಆಯ್ದುಕೊಳ್ಳಲಾರಂಭಿಸಿದರು. ಅವು ಬಹಳ ಪವಿತ್ರ ವಸ್ತು ಗಳಂತೆ. ಅವು ಮನೆಯಲ್ಲಿ ಇದ್ದರೆ ದೆವ್ವ, ಪೀಡೆ, ಪಿಶಾಚಿ, ಬಾಲಗ್ರಹ ಇವು ಯಾವೂ ಮನೆಗೆ ಕಾಲಿಡವಂತೆ.

ಹಾಗೇ ಮೂರೊ ನಾಲ್ಕೊ ಮೈಲಿ ಮುಂದುವರಿದನಂತರ ಬೌದ್ಧರ ಒಂದು ಆಶ್ರಮ (ಗೊಸಲ್ ಗೊಂಫ) ಸಿಕ್ಕಿತು. ಅದರೊಳಕ್ಕೆ ಹೋಗಿ ಅಲ್ಲಿ ಏನೇನಿದೆ ಎಂಬುದನ್ನೆಲ್ಲಾ ನೋಡಿದೆವು. ಒಂದು ದೊಡ್ಡ ಅಂಗಳದಲ್ಲಿ ಒಂದು ಗೋಡೆಯ ಅಂಚಿನ ಉದ್ದಕ್ಕೂ ಪಡಿಪಡಿಯಾಗಿ ಬುದ್ಧನ ಪ್ರತಿಮೆ

ಇಟ್ಟಿದ್ದರು. ನಮ್ಮ ಕೂಲಿ ಆಳುಗಳು ಅಲ್ಲಿದ್ದ ಬೌದ್ಧ ಸನ್ಯಾಸಿಗಳಿಂದ ಒಂದೊಂದು ಆಣೆಗೆ ಒಂದೊಂದು ದೀಪದಬತ್ತಿ ಕೊಂಡುಕೊಂಡು ಅವನ್ನು ಬುದ್ಧನ ಪ್ರತಿಮೆಯ ಮುಂದೆ ಹೊತ್ತಿಸಿ ಇಟ್ಟು ಅಡ್ಡಬೀಳಲಾರಂಭಿಸಿದರು. ನಾವೂ ಹಾಗೇ ಮಾಡಿದೆವು. ಮೇಲ್ಛಾವಣಿಯಿಂದ ವಿವಿಧ ಆಕಾರಗಳಿಂದ ಮುದ್ರಿತವಾದ ವಿವಿಧ ಬಣ್ಣಗಳ ಬಟ್ಟೆಗಳು ಸಾಲು ಸಾಲಾಗಿ ನೇತಾಡು ತ್ತಿದ್ದುವು. ಇದೇ ರೀತಿಯ ಗೊಂಫಗಳು ಮಾನಸಸರೋವರದ ಸುತ್ತಲೂ ಒಟ್ಟು ಎಂಟು ಇವೆಯಂತೆ. ವಾಯುವ್ಯದಲ್ಲಿ ಗೊಸಲ್ ಗೊಂಫ ಮತ್ತು ಚ್ಯೂ ಗೊಂಫ, ಉತ್ತರದಲ್ಲಿ ಚೆರ್ಕಿಪ್ ಗೊಂಫ, ಲಾಂಗ್ಬೊನ ಗೊಂಫ ಮತ್ತು ಪೊನ್ರಿ ಗೊಂಫ, ಪೂರ್ವದಲ್ಲಿ ಸೆರಾಲಂಗ್ ಗೊಂಫ, ದಕ್ಷಿಣದಲ್ಲಿ ಎರ್ನಗೋ ಗೊಂಫ ಮತ್ತು ತೊಗಲ್‌ಕೊ ಗೊಂಫ (ಥೋಕರ್ ಗೊಂಫ). ಇವನ್ನೆಲ್ಲಾ ನೋಡಿಬರಬೇಕಾದರೆ ಮಾನಸಸರೋವರದ ಸುತ್ತ ಒಟ್ಟು ಅರವತ್ತುನಾಲ್ಕು ಮೈಲಿ ನಡೆಯಬೇಕಾಗುವುದಂತೆ. ಮಾನಸಸರೋವರದ ಪೂರ್ವ ದಡದಲ್ಲಿ ಸ್ವರ್ಣವರ್ಣದ ಮರಳು ದೊರೆಯುವುದಂತೆ.

ಮಾನಸಸರೋವರದ ವಿಸ್ತೀರ್ಣ ಇನ್ನೂರು ಚದರಮೈಲಿ, ಇದರ ಪಕ್ಕದಲ್ಲೇ ಇರುವ ರಾವಣನ ಸರೋವರದ ವಿಸ್ತೀರ್ಣ ನೂರುನಲವತ್ತು ಚದರಮೈಲಿ ಮಾತ್ರ. ಆದರೆ ಒಂದು ವೈಶಿಷ್ಟ್ಯ. ಚಳಿಗಾಲದಲ್ಲಿ ರಾವಣನ ಸರೋವರ ಮಾನಸಸರೋವರಕ್ಕಿಂತ ಹದಿನೈದು ಇಪ್ಪತ್ತು ದಿನ ಮುಂಚಿತ ವಾಗಿ ಗಡ್ಡೆಕಟ್ಟಿ ಬೇಸಿಗೆಯಲ್ಲಿ ಮಾನಸಸರೋವರ ಕರಗಿದ ಎರಡು ಮೂರು ವಾರದೊಳಗೆ ಅದೂ ಕರಗುವುದಂತೆ. ಒಂದು ವರ್ಷ ಒಬ್ಬರು ಅಲ್ಲೇ ಇದ್ದು ಅಲ್ಲಿನ ಉಷ್ಣಾಂಶವನ್ನು ಅಳೆದರಂತೆ. ಜುಲೈ ೧೯ನೆ ತಾರೀಖು ಮಧ್ಯಾಹ್ನ ೬೭°F ಇತ್ತಂತೆ, ನಡುರಾತ್ರಿ–೦೮.೫°F ಇತ್ತಂತೆ. ಮತ್ತೆ ಫೆಬ್ರುವರಿ ೧೬ನೆ ತಾರೀಖು ಮಧ್ಯಾಹ್ನದ ವೇಳೆ ೩°F ಇತ್ತಂತೆ. ಅಲ್ಲಿನ ಚಳಿಗಾಲದ ಮೂರೂವರೆ ತಿಂಗಳ ಅವಧಿಯಲ್ಲೂ ದಿನವೂ ಮಧ್ಯಾಹ್ನದ ವೇಳೆ ಕೇವಲ–೧೦°F ಇತ್ತಂತೆ, ರಾತ್ರಿ ವೇಳೆ–೦°F ಇತ್ತಂತೆ.

ಹಾಗೇ ಮುಂದುವರಿದು ಕೊನೆಗೆ ಮಾಲಥವನ್ನು ತಲುಪಿದೆವು. ಈ ದಿನವೂ ನಮ್ಮ ಡೇರೆಗಳನ್ನು ಮಾನಸಸರೋವರದ ದಡದಲ್ಲೇ ಹಾಕಿದೆವು. ಸ್ವಲ್ಪ ಹೊತ್ತು ವಿಶ್ರಮಿಸಿಕೊಂಡು ಮಾನಸಸರೋವರದ ಸ್ನಾನಕ್ಕೆ ಹೊರಟೆವು. ಇಲ್ಲಿಂದಲೂ ಮಾನಸಸರೋವರದ ಮತ್ತು ಅದರ ಸುತ್ತ ಮುತ್ತಲಿನ ದೃಶ್ಯ ಬಹಳ ಚೆನ್ನಾಗಿ ಕಾಣುತ್ತದೆ.

## ಮಾಲಥದಿಂದ ಥಮ್ಮುವಿಗೆ

**೧೪,೯೦೦ ಅಡಿ ಎತ್ತರದಿಂದ ೧೫,೦೦೦ ಅಡಿ ಎತ್ತರಕ್ಕೆ. ದೂರ ೧೧ ಮೈಲಿ.**

**ಪ್ರಯಾಣ ಬೆಳಗಿನ ೧೦ ರಿಂದ ಅಪರಾಹ್ನ ೨ ರ ವರೆಗೆ.**

**ತಾ|| ೪-೭-'೫೧ ಬುಧವಾರ.**

ಇಂದಿನ ಬೆಳಗಿನ ಜಾವ ನಾಲ್ಕು ಘಂಟೆಗೆ ಎದ್ದು ನೋಡುತ್ತೇನೆ ಸ್ವಚ್ಛ ಆಕಾಶ ನಕ್ಷತ್ರಗಳಿಂದ ತುಂಬಿ ಸುಮ್ಮನೆ ನಗುತ್ತಿದೆ. ನಿನ್ನೆಗಿಂತ ಇಂದು ಪೂರ್ವದಿಗಂತದಲ್ಲಿ ಮೋಡಗಳೇನೊ ವಿರಳ. ಆದರೂ ಅವು ಒಂದು ಬಹಳ ಅತಿಶಯವಾದ ರೀತಿಯಲ್ಲಿ ಸೂರ್ಯನ ಕಾಂತಿಯನ್ನು ಪ್ರತಿಬಿಂಬಿಸುತ್ತಿದ್ದುವು. ಸರೋವರ ಸಂಪೂರ್ಣ ಸ್ಥಿರವಾಗಿ ನಿಂತಿತ್ತು ನಾವು ಡೇರೆಗಳನ್ನು ಅಂಥಾ ಸ್ಥಳದಲ್ಲಿ ಹಾಕಿದ್ದೆವು, ಒಳಗೆ ಕುಳಿತೇ ಹೊರಗಿನ ದೃಶ್ಯವನ್ನು ನೋಡಬಹುದಾಗಿತ್ತು. ಘಂಟೆ ಐದಾಯಿತು. ಮುಂಬೆಳಕು ಬರಲಾರಂಭಿಸಿತು. ಇಂದಿನ ಮೋಡದಲ್ಲಿ ಒಂದು ವಿಧವಾದ ವೈಶಿಷ್ಟ್ಯವಿದ್ದುದರಿಂದ ಇಂದಿನ ಪೂರ್ವದಿಗಂತ ನಿನ್ನೆಗಿಂತಲೂ ಬಹಳ ಶೋಭಾಯಮಾನವಾಗಿ ಕಾಣಲಾರಂಭಿಸಿತು. ಅರುಣೋದಯ ಆಗುತ್ತ ಆಗುತ್ತ ಇಂದಿನ ಮೋಡಗಳು ಉಡುತ್ತಿದ್ದ ಹೊಂಬಣ್ಣದ ಉಡಿಗೆಯನ್ನು ವರ್ಣಿಸಲು ಕಾಳಿದಾಸನೊಬ್ಬನಿಗೆ ಮಾತ್ರವೇ ಸಾಧ್ಯವಾಗಬಹುದು ಎಂದೆನಿಸಿತು. ೫-೧೫ ಕ್ಕೆ ಸೂರ್ಯ ಬೆಟ್ಟಗಳ ಸಂದಿಗಳಿಂದ ಇಣಿಕಿನೋಡಿದ. ಆತ ನೋಡುತ್ತಾನೆ: ಮಾನಸಸರೋವರ ಇನ್ನೂ ಪ್ರಶಾಂತವಾಗೇ ಇದೆ. ಸ್ವಲ್ಪ ಚಲನವಲನವೂ ಅದರಲ್ಲಿ ಇಲ್ಲ. ಇನ್ನೂ ನಿರ್ವಿಕಲ್ಪಸಮಾಧಿಯಲ್ಲೇ ಇದ್ದು ಬ್ರಹ್ಮನಲ್ಲಿ ಲೀನವಾಗಿರುವಂತೆ ತೋರಿಬರುತ್ತಿದೆ. ಸೌಮ್ಯ ಮುಖದಿಂದ ಕೂಡಿ ತನ್ನ ಪ್ರಭೆಯನ್ನು ಪ್ರತಿಬಿಂಬಿಸುತ್ತಿದೆ. ದಿವ್ಯ ಜ್ಯೋತಿಯನ್ನೇ ಹೊರಗೆಡಹುತ್ತಿದೆ. ತನ್ನ ಬಿಂಬವನ್ನು ಅಚ್ಚಳಿಯದ ರೀತಿಯಲ್ಲಿ ತನ್ನ ಹಣೆಯಮೇಲೆ ತಿಲಕವಿಟ್ಟುಕೊಂಡಿದೆ. ಆತನಿಗೂ ಅನಿಸಿರಬೇಕು: "ಈ ಅದ್ಭುತ ಮಾನಸಸರೋವರದ ಸೊಬಗನ್ನು ನೋಡುತ್ತ ಇಲ್ಲಿಯೇ ನಿಂತುಬಿಡೋಣವೆ?" ಎಂದು. ಆದರೆ ಈ ಜಗತ್ತಿನಲ್ಲಿ ಏನುಬೇಕಾದರೂ ನಿಂತುಹೋಗಬಹುದು. ಆದರೆ ಚಂದ್ರ ಸೂರ್ಯರು ಮಾತ್ರ ತಮ್ಮ ಕಾಲನಿಯಮಾನುಸಾರ ಚಲಿಸುತ್ತಲೇ ಇರಬೇಕು. ಆದ್ದರಿಂದ ಆ ಬಡ

ಪಾಯಿ ಮನಸ್ಸಿಲ್ಲದ ಮನಸ್ಸಿನಿಂದ ಮಾನಸಸರೋವರದ ಆ ಪ್ರಶಾಂತ ಸೊಬಗನ್ನು ಓರೆನೋಟದಿಂದಲೇ ನೋಡುತ್ತ ಮುಂದು ಮುಂದಕ್ಕೆ ಕಾಲಿಡಲಾರಂಭಿಸಿದ.

ನಾನೂ ಮಾನಸಸರೋವರದ ಆ ಅದ್ಭುತ ದೃಶ್ಯವನ್ನ ಆರು ಘಂಟೆಯವರೆಗೆ ನೋಡುತ್ತಿದ್ದು ಅದರಲ್ಲಿ ಸ್ನಾನಮಾಡಲು ಹೋದೆ. ಸ್ನಾನದ ಸಮಯದಲ್ಲಿ ಇಂದೂ ಸಕಲ ಜೀವರಾಶಿಗಳ ಹಿತಚಿಂತನೆಗಾಗಿ ಪ್ರಾರ್ಥಿಸಿ ಸರೋವರದ ತೀರ್ಥವನ್ನು ಕೆಲವು ಸೀಸೆಗಳಲ್ಲಿ ತುಂಬಿಕೊಂಡೆ. ಸರೋವರ ಇಂದು ಬಹಳ ಪ್ರಶಾಂತವಾಗಿದ್ದುದರಿಂದ ಸುಮಾರು ಮೂವತ್ತು ನಲವತ್ತು ಅಡಿ ಆಳದಲ್ಲಿ ಬಿದ್ದಿದ್ದ ಕಲ್ಲುಗಳೂ ಬಹಳ ಸ್ಪಷ್ಟವಾಗಿ ಕಂಡುಬರುತ್ತಿದ್ದುವು.

ನಾವು ಮಾನಸಸರೋವರವನ್ನು ಬಿಟ್ಟು ಹೊರಟಾಗ ನಮ್ಮೆಲ್ಲರಿಗೂ ಬಹಳ ವ್ಯಥೆ ಆಯಿತು. ಇಲ್ಲಿಂದ ಮುಂದಕ್ಕೆ ಮುಂದುವರಿದನಂತರ ಕೈಲಾಸಪತಿಯ ಪ್ರದಕ್ಷಿಣೆಮಾಡಿ ಹಿಂದಿರುಗಿ ಮತ್ತೆ ಈ ಕಡೆಗೆ ಬರುವವರೆಗೆ ಮಾನಸಸರೋವರದ ದರ್ಶನ ದೊರೆಯುವ ಹಾಗಿರಲಿಲ್ಲ. ಆಗ ಅನಿಸಿತು : “ ಕೈಲಾಸಪತಿಯ ಕ್ರೀಡಾಸ್ಥಾನವಾದ ಈ ಮಾನಸಸರೋವರವೇ ಇಷ್ಟು ರಮ್ಯವಾಗಿರುವಾಗ ಆತನ ಸ್ವಸ್ಥಾನ ಕೈಲಾಸಗಿರಿ ಇನ್ನೆಷ್ಟು ರಮ್ಯವಾಗಿರಬೇಕು ? ” ಈ ಭಾವನೆ ಆ ಮನೋವ್ಯಥೆಯನ್ನು ನುಂಗಿಬಿಟ್ಟಿತು.

ಸರೋವರದ ದಡವನ್ನು ಹತ್ತಿ ಮೇಲಕ್ಕೆ ಬಂದನಂತರ ಕಂಡುಬಂತು ನಮ್ಮ ಇಂದಿನ ದಾರಿ ಬಹಳ ದೂರದವರೆಗೆ ಆ ಮುಳ್ಳುಪೊದೆಗಳ ಮೂಲಕವೇ ಮುಂದುವರಿಯುತ್ತಿರುವುದು ಎಂದು. ನಮ್ಮ ಬಲಭಾಗಕ್ಕೆ ಕೆಲವು ಎತ್ತರವಾದ ತಿಟ್ಟುಗಳು ಸ್ವಲ್ಪ ದೂರದವರೆಗೆ ಹಬ್ಬಿಕೊಂಡಿದ್ದುವು. ಆದ್ದರಿಂದಲೇ ಕೈಲಾಸಪತಿ ನಮ್ಮ ಕಣ್ಣಿಗೆ ಇನ್ನೂ ಬೀಳುತ್ತಿರಲಿಲ್ಲ. ಆ ಮಾರ್ಗವಾಗೇ ಸ್ವಲ್ಪ ದೂರ ಮುಂದುವರಿದನಂತರ ನಮ್ಮ ಎಡಗಡೆಗೆ ರಾವಣನ ಸರೋವರ ಕಾಣಿಸಿಕೊಂಡಿತು. ಹಾಗೇ ಮುಂದುವರಿದು ಮಾನಸಸರೋವರದಿಂದ ರಾವಣನ ಸರೋವರಕ್ಕೆ ನೀರು ಹರಿದುಬರುತ್ತಿರುವ ಕಾಲುವೆಯ ಹತ್ತಿರಕ್ಕೆ ಬಂದೆವು. ಅಲ್ಲಿ ನಾಲ್ಕೈದು ಕಡೆ ಬಿಸಿ ನೀರಿನ ಬುಗ್ಗೆಗಳು ಇದ್ದುವು. ಅವೆಲ್ಲಾ ಗಂಧಕದ ವಾಸನೆ ಕೊಡುತ್ತಿದ್ದುವು. ಆ ಕಾಲುವೆಯನ್ನು ದಾಟಿ ಸ್ವಲ್ಪ ದೂರ ಮುಂದುವರಿದನಂತರ ಎರಡು ದಿಣ್ಣೆಗಳ ಕಂಡಿಯಲ್ಲಿ ಕೈಲಾಸಪತಿ ಇಣಿಕಿನೋಡಿದ. ಆಗ ಆತ ಸನ್ನೆಯಿಂದ

ಹೇಳಿದ : " ಬನ್ನಿ ಬನ್ನಿ ! ಬಹಳ ದಣಿದಿದ್ದೀರಿ ಬನ್ನಿ ಬನ್ನಿ ! ಇನ್ನೇನು ನನ್ನನ್ನು ಸಮೀಪಿಸುತ್ತಿರುವಿರಿ ಬನ್ನಿ ಬನ್ನಿ !" ಆತನ ಪ್ರೇಮಪೂರಿತ ಆ ಆಹ್ವಾನ ನಮ್ಮ ದೇಹಕ್ಕೆ, ಮನಸ್ಸಿಗೆ, ಆತ್ಮಕ್ಕೆ ದೊಡ್ಡ ಶಕ್ತಿಯನ್ನು ತುಂಬಿತು. ಆನಂದದಿಂದ ಮುಂದುವರಿಯಲಾರಂಭಿಸಿದೆವು.

ಹಾಗೇ ಸ್ವಲ್ಪ ದೂರ ಮುಂದುವರಿಯುವುದರೊಳಗಾಗಿ ಒಂದು ವಿಶಾಲವಾದ ಮೈದಾನ ಸಿಕ್ಕಿತು. ಅದು ನೇರವಾಗಿ ಯಾವ ತಡೆಯೂ ಇಲ್ಲದೆ ಕೈಲಾಸಪರ್ವತದ ಬುಡದವರೆಗೂ ಹಬ್ಬಿತ್ತು. ಅದಕ್ಕೆ " ಪರ್ಕ ಮೈದಾನ " ಅಂತ ಹೆಸರು. ನಾವು ಇಲ್ಲಿಗೆ ಬರುವುದರೊಳಗೆ ಖೀಚ್‌ಕಂಪ ನಮಗಿಂತ ಎರಡುದಿನ ಮುಂಚೆ ಹೊರಟು ಆ ಆಂಧ್ರರ ಗುಂಪಿಗೆ ಮಾನಸ ಸರೋವರದ ದರ್ಶನ ಮಾಡಿಸಿ ಅವರನ್ನು ಹಿಂದಕ್ಕೆ ಕಳುಹಿಸಿಕೊಟ್ಟು ಆ ಇಬ್ಬರು ಬಂಗಾಳಿ ಯುವಕರಿಗೆ ಕೈಲಾಸಪತಿಯ ಪ್ರದಕ್ಷಿಣೆಮಾಡಿಸಿ ಅವರನ್ನು ಕರೆದುಕೊಂಡು ಬರುತ್ತಿದ್ದುದು ಕಣ್ಣಿಗೆ ಬಿತ್ತು. ನಾವು ಅಲ್ಲಿ ಸ್ವಲ್ಪ ಹೊತ್ತು ನಿಂತು ಅವರನ್ನು ಎದುರುಗೊಂಡೆವು. ಬಳಿಕ ಅವರೊಡನೆ ಮಾತುಕತೆಯಾಡಿ ಅವರನ್ನು ಬೀಳ್ಕೊಟ್ಟು ಪರ್ಕ ಮೈದಾನದ ಕಡೆ ಮುಂದುವರಿಯಲಾರಂಭಿಸಿದೆವು. ಈಗ ಕೈಲಾಸಪರ್ವತ ಬಹಳ ಸ್ಪಷ್ಟ ವಾಗಿ ಕಾಣಿಸಿಕೊಳ್ಳಲಾರಂಭಿಸಿತು. ನಾನು ಹಿಂದೆ ಕೇಳಿದ್ದೆ : " ಕೈಲಾಸ ಪರ್ವತದ ಸ್ಪಷ್ಟ ದರ್ಶನ ದೊರೆಯುವುದು ಬಹಳ ದುರ್ಲಭ. ಯಾವಾಗ ನೋಡಿದರೂ ಅದರ ಸುತ್ತ ಬಹುಮಟ್ಟಿಗೆ ಮೋಡ ಇದ್ದೇ ಇರುತ್ತವೆ. ಒಮ್ಮೊಮ್ಮೆ ಕೆಲವು ದಿನಗಳವರೆಗೆ ಅದು ಸಂಪೂರ್ಣವಾಗಿ ಮೋಡಗಳಿಂದ ಆವೃತವಾಗಿಬಿಟ್ಟಿರುತ್ತದೆ. ಆಗ ಅದರ ದರ್ಶನ ದುರ್ಲಭವೇ ಆಗಿಬಿಡು ತ್ತದೆ. ಅನೇಕರು ತಮ್ಮ ದೌರ್ಭಾಗ್ಯದಿಂದ ಅಷ್ಟು ಕಷ್ಟ ತೆಗೆದುಕೊಂಡು ಅಲ್ಲಿಗೆ ಹೋಗಿಯೂ ಕೈಲಾಸಗಿರಿಯ (ಕೈಲಾಸಪತಿಯ) ಸ್ಪಷ್ಟದರ್ಶನ ಪಡೆಯದೆ ಹಿಂದಿರುಗಬೇಕಾಗುತ್ತದೆ. ಯಾತ್ರಿಕನ ಪುಣ್ಯವಶದಿಂದ ಮಾತ್ರವೇ ಕೈಲಾಸಗಿರಿಯ ಸ್ಪಷ್ಟ ದರ್ಶನ ದೊರೆಯಬೇಕು. "

ಆದರೆ ಭಗವಂತನ ಕೃಪೆಯಿಂದ ಇಲ್ಲಿಂದ ಹಿಡಿದು ನಾವು ಹಿಂದಿರು ಗುವಾಗ ಎಲ್ಲಿಂದಾಚೆಗೆ ಕೈಲಾಸಗಿರಿಯ ದರ್ಶನ ಸಾಧ್ಯವಿಲ್ಲವೊ ಅಲ್ಲಿಯ ವರೆಗೆ ಸ್ಪಷ್ಟವಾಗೇ ಅದು ನಮಗೆ ಕಾಣಿಸಿಕೊಂಡಿತು. ಎಲ್ಲೊ ಅಪರೂಪಕ್ಕೆ ಒಂದೆರಡು ಮೋಡ ಒಮ್ಮೊಮ್ಮೆ ಅದರ ಹಿಮದಿಂದಲೇ ಉದ್ಭವಿಸಿ ಅದನ್ನು ಮುಚ್ಚಿದ್ದು ಅಲ್ಲಿಂದ ಬೇಗ ಬೇಗ ಸರಿದುಹೋಗಿಬಿಡುತ್ತಿದ್ದುವು.

ನಾವು ಮುಂದು ಮುಂದುವರಿದಂತೆಲ್ಲಾ ಅದು ದೊಡ್ಡ ದೊಡ್ಡದಾಗಿ ಕಾಣುತ್ತಾ ಬಂದು ಥಮ್ಚು ಎಂಬ ಪ್ರದೇಶವನ್ನು ಮುಟ್ಟಿದಾಗ ಸಾಕಾದಷ್ಟು ದೊಡ್ಡದಾಗಿಯೂ ಬಹಳ ಸ್ಪಷ್ಟವಾಗಿಯೂ ಕಾಣಿಸಿಕೊಳ್ಳಲಾರಂಭಿಸಿತು. ಹಿಮ ಬೇರೆಲ್ಲಿಯೂ ಕಟ್ಟಿರದೆ ಕೈಲಾಸಪರ್ವತದ ಒಂದು ಅತ್ಯುನ್ನತ ಶಿಖರದಲ್ಲಿ ಮಾತ್ರ ಕಟ್ಟಿಕೊಂಡಿತ್ತು. ಅದೇ ಕೈಲಾಸಪತಿಯ ಆವಾಸಸ್ಥಾನ. ಅದರ ತುದಿಗೆ ಹತ್ತಿಹೋಗಲು ಮೆಟ್ಟಿಲ ಸಾಲೂ ಇರುವುದೊ ಏನೊ ಎಂಬಂತೆ ಕಲ್ಲುಗಳು ಹಿಮದಿಂದ ಹೊರಕ್ಕೆ ಚಾಚಿ ನಿಂತಿದ್ದುವು. ಆಗ ಅನಿಸಿತು: "ಬಹುಶಃ ಕೈಲಾಸಪತಿ ಆ ಮೆಟ್ಟಿಲ ಸಾಲುಗಳ ಮೇಲೆ ಹತ್ತಿ ಇಳಿಯುವುದು ನಮ್ಮ ಕಣ್ಣಿಗೆ ಬಿದ್ದರೂ ಬೀಳಬಹುದೆ ?"

ಥಮ್ಚುವಿನಲ್ಲಿ ಸ್ವಲ್ಪ ಹುಲ್ಲೂ ಬೆಳೆದಿತ್ತು. ಬಹುಶಃ ಕೈಲಾಸಪತಿಯ ವಾಹನ ವೃಷಭನಿಗೆ ಅಂತ ಕಾಣುತ್ತೆ. ಇಲ್ಲಿ ಯಥೇಚ್ಛವಾಗಿ ಗಣೇಶನ ವಾಹನ ಇಲಿಗಳೂ ಇದ್ದುವು. ದೂರದಲ್ಲಿ ಎರಡು ಕಾಡುಕುದುರೆಗಳೂ ಕಾಣಿಸಿಕೊಂಡುವು. ಹತ್ತಿರದಲ್ಲೇ ಟಿಬೆಟ್ಟಿಯನ್ನರ ನಾಲ್ಕು ಡೇರೆಗಳೂ ಇದ್ದುವು. ಅವುಗಳ ಬಳಿಯಲ್ಲಿ ಅನೇಕ ಚಮರೀಮೃಗಗಳು ಮತ್ತು ಕುರಿಗಳು ಮೇಯುತ್ತಿದ್ದುವು. ಈ ಸ್ಥಳ ಅಂಥ ಬಯಲುಪ್ರದೇಶ ಮರೆ ಎಂಬತಕ್ಕದ್ದೇ ಇಲ್ಲ. ಬಟ್ಟಬಯಲು ಏನು ಎಂಬುದು ಇಂದು ಮಾತ್ರ ನನಗೆ ಅರ್ಥವಾಯಿತು. ಇಲ್ಲಿನ ಮಣ್ಣು ಕರ್‍ಲು ಮಣ್ಣಿನ ಹಾಗೆ ಸ್ವಲ್ಪ ಕಪ್ಪು. ಗೇಣುದ್ದ ಆಳದ ಪುಟ್ಟ ಪುಟ್ಟ ಅನೇಕ ಝರಿಗಳು ಅಲ್ಲಲ್ಲೇ ಹರಿಯುತ್ತಿದ್ದುವು. ಇವೆಲ್ಲಾ ಕೈಲಾಸಪರ್ವತದಿಂದ ಇಳಿದುಬಂದು ರಾವಣನ ಸರೋವರವನ್ನು ಸೇರುತ್ತಿದ್ದುವು.

ಈ ಭಾಗಕ್ಕೆಲ್ಲಾ ಮಾನಸಕಾಂಡ ಅಂತ ಹೆಸರು. ಇದರ ಉದ್ದ ಪೂರ್ವ ಪಶ್ಚಿಮವಾಗಿ ೧೩೦ ಮೈಲಿ, ಉತ್ತರ ದಕ್ಷಿಣವಾಗಿ ೯೦ ರಿಂದ ೧೦೦ ಮೈಲಿ. ಈ ಭಾಗದ ಜನಸಂಖ್ಯೆ ೫,೦೦೦ ಮಾತ್ರವೇ. ಇಡೀ ಟಿಬೆಟ್ ಪ್ರಸ್ಥಭೂಮಿಯ ಜನಸಂಖ್ಯೆಯೂ ಕೇವಲ ೩,೦೦೦,೦೦೦. ವಿಸ್ತೀರ್ಣ ೮,೧೪,೦೦೦ ಮೈಲಿ. ಎತ್ತರ ೧೨,೦೦೦ ಅಡಿಯಿಂದ ೧೬,೦೦೦ ಅಡಿಯವರೆಗೆ ವ್ಯತ್ಯಾಸ ಹೊಂದುತ್ತಿರುತ್ತದೆ.

ಇಂದು ನಮ್ಮ ಗೈಡಿಗೆ ದಾರಿಯಲ್ಲಿ ಹೊಟ್ಟೆನೋವು ಬಂದು ಬಹಳ ಸಂಕಟಪಟ್ಟ. ನಮ್ಮನ್ನು ಮುಂದುವರಿಯುವಂತೆ ಹೇಳಿ ತಾನು ಮಾತ್ರ

ಸಾವಕಾಶವಾಗಿ ಮುಂದುವರಿದು ಸಾಯಂಕಾಲದೊಳಗೆ ಧಮ್ಪುವನ್ನು ತಲುಪಿದ. ಇಂದಿನ ಇಡೀ ದಾರಿಯಲ್ಲೆಲ್ಲಾ ಮಾಂಧಾತಪರ್ವತ ಬಹಳ ಸುಂದರವಾಗಿ ಕಾಣುತ್ತ ವಿವಿಧ ಆಕಾರಗಳನ್ನು ತಾಳುತ್ತಿತ್ತು. ಇಂದಿನ ಸಾಯಂಕಾಲ ಮತ್ತು ರಾತ್ರಿ ಬಹಳ ಹೊತ್ತಿನವರೆಗೆ ಕೈಲಾಸಪರ್ವತದ ಅದ್ಭುತ ದೃಶ್ಯವನ್ನು ನೋಡುತ್ತಲೇ ಕಾಲ ಕಳೆದೆವು.



೭

# ಕೈಲಾಸಗಿರಿಯ ಪ್ರದಕ್ಷಿಣೆ

## ಪ್ರಯಾಣ ತಾ|| ೫-೭-೧೯೫೧ ರಿಂದ ೮-೭-೧೯೫೧ ರ ವರೆಗೆ. ದೂರ ಸುಮಾರು ೪೨ ಮೈಲಿ.

ಕೈಲಾಸಗಿರಿಯನ್ನ ಒಂದು ದೊಡ್ಡ ಅಗಮ್ಯ ದುರ್ಗವೇ ಎಂದು ಹೇಳಬಹುದು. ಅದರ ಎತ್ತರ ೨೨,೦೨೮ ಅಡಿ. ಅದರ ದಕ್ಷಿಣ ದಿಕ್ಕನ್ನು ಬಿಟ್ಟರೆ ಉಳಿದ ಮೂರು ದಿಕ್ಕುಗಳಲ್ಲೂ ಬೆಟ್ಟಗಳ ಸಾಲು ಕೋಟೆ ಗೋಡೆ ಯಂತೆ ಎದ್ದಿವೆ. ಅನಂತರ ಕಂದಕ. ಆ ಕಂದಕದಲ್ಲಿ ಸುತ್ತಲೂ ನದಿ ಹರಿಯುತ್ತಿದೆ. ಬಳಿಕ ನಿಜವಾದ ದುರ್ಗ. ಅದರ ತುತ್ತತುದಿಯಲ್ಲಿ ಹಿಮ ಕಟ್ಟಿ ಲಿಂಗರೂಪವನ್ನು ತಾಳಿದೆ. ಅಲ್ಲಿಗೆ ಹತ್ತಿಹೋಗಿಬಿಡಲಾಗು ವುದಿಲ್ಲವೆ ಎಂದರೆ, ಸುಲಭಸಾಧ್ಯವಲ್ಲ. ಪಶ್ಚಿಮ, ಉತ್ತರ, ಪೂರ್ವ ಈ ದಿಕ್ಕುಗಳಲ್ಲಿ ಕೈಲಾಸಪರ್ವತದ ಓಡೆ ತೊಂಬತ್ತು ಡಿಗ್ರಿ ಓರೆಯಲ್ಲೇ ನೇರ ವಾಗಿ ಮೇಲಕ್ಕೆ ಎದ್ದಿವೆ. ಈ ಮೂರು ಕಡೆಯಿಂದ ಮೇಲಕ್ಕೆ ಹತ್ತುವುದರ ಮಾತು ಹಾಗಿರಲಿ, ಕೈಲಾಸಗಿರಿಯ ಶಿಖರವನ್ನು ನೋಡಬೇಕಾದರೇ ಕತ್ತನ್ನು ತೊಂಬತ್ತು ಡಿಗ್ರಿಗೆ ತಿರುಗಿಸಬೇಕು. ಒಂದು ಪಕ್ಷ ಗೌರೀಶಂಕರ ವನ್ನು (ಮೌಂಟ್ ಎವರೆಸ್ಟ್) ಹತ್ತಿದ ಈ ಯುಗದಲ್ಲಿ ಹೇಗೋ ಮಾಡಿ ಆ ಲಿಂಗರೂಪದ ಹಾಗೆ ಹಿಮ ಕಟ್ಟಿದೆಯಲ್ಲ ಅಲ್ಲಿಯವರೆಗೆ ಹತ್ತೇಬಿಟ್ಟೆವು ಅಂತ ಇಟ್ಟುಕೊಳ್ಳಿ. ಆ ಹಿಮ ಕಟ್ಟಿದ ಭಾಗ ಏನು ಕೆಲವು ಅಡಿ ಮಾತ್ರ ಎತ್ತರವಾಗಿ ಇದೆಯೆ? ಇಲ್ಲ. ಕನಿಷ್ಠ ಪಕ್ಷ ಐದೂವರೆಸಾವಿರ ಅಡಿಯಷ್ಟಾ ದರೂ ಎತ್ತರವಾಗಿದೆ. ಆ ಎತ್ತರಕ್ಕೆ ತಕ್ಕಂತೆ ದಪ್ಪವಾಗೂ ಇದೆ. ನಾನು ಭಾರತಕ್ಕೆ ಹಿಂದಿರುಗಿದ ಮೇಲೆ ಕೆಲವರು ಕೇಳಿದರು: "ಸ್ವಾಮಿಜಿ, ನೀವು ಕೈಲಾಸಪರ್ವತಕ್ಕೆ ಹೋಗಿದೇನೆ ಅಂತೀರಲ್ಲ ಅಲ್ಲೇನಾದರು ದೇವಾಲಯ ವಿದೆಯೆ?" ನಾನು ಹೇಳಿದೆ: "ನೋಡಿ, ಆ ಹಿಮಲಿಂಗದ ಎತ್ತರ ಸುಮಾರು ಐದೂವರೆಸಾವಿರ ಅಡಿ. ಆ ಲಿಂಗದ ಪೀಠದ ಸುತ್ತ ಒಂದುಸಲ ಪ್ರದಕ್ಷಿಣೆ ಮಾಡಿ ಬರಬೇಕಾದರೆ ಮೂವತ್ತೆರಡು ಮೈಲಿ ನಡೆಯಬೇಕಾಗುತ್ತದೆ.

ನೋಡಿ, ನಿಮ್ಮಲ್ಲಿ ಯಾರಿಗಾದರೂ ಎದೆ ಇದೆಯೆ ಆ ಐದೂವರೆಸಾವಿರ ಅಡಿ ಎತ್ತರವಿರುವ, ಮೂವತ್ತೆರಡು ಮೈಲಿ ಸುತ್ತಳತೆಯುಳ್ಳ ಶಿವಲಿಂಗಕ್ಕೆ ದೇವಾಲಯ ಕಟ್ಟಿಸಲು ? ” ಆಗ ಅವರು ಮೂಕರಾಗಿ ಕುಳಿತರು. ಹೋಗಲಿ, ದಕ್ಷಿಣ ದಿಕ್ಕಿನಲ್ಲಿ ಉಳಿದ ಮೂರು ದಿಕ್ಕುಗಳ ಹಾಗೆ ಕೈಲಾಸ ಪರ್ವತ ಒಂದೇ ಸಮನೆ ನೇರವಾಗಿ ನೆಲದಿಂದ ಎದ್ದಿಲ್ಲವಲ್ಲ ಮತ್ತು ಈ ಭಾಗದಲ್ಲಿ ಹೊರಗಿನ ಬೆಟ್ಟಗಳ ಸಾಲೂ ಕೋಟೆಯಂತೆ ನಿಂತಿಲ್ಲವಲ್ಲ, ಈ ಭಾಗದಿಂದ ಮೇಲಕ್ಕೆ ಹತ್ತಲಾಗುವುದಿಲ್ಲವೆ ಎಂದರೆ, ಸಾಧ್ಯವಿಲ್ಲ. ಈ ಕಡೆಯಿಂದಲೂ ಆ ಪರ್ವತದ ಮೇಲೇನೇ ಬಹಳ ಕಡಿದಾಗಿ ಎದ್ದಿರುವ ಒಂದಲ್ಲ ಎರಡಲ್ಲ ಅನೇಕ ಕೋಟೆಯ ಗೋಡೆಗಳಂಥ ದಿಬ್ಬಗಳನ್ನು ನೋಡಬಹುದು.

ನನ್ನ ಕಣ್ಣಿಗೆ ಕೈಲಾಸಗಿರಿ ಯಾರೊ ಒಂದು ವಿಶೇಷ ರೀತಿಯಾಗಿ ಪ್ಲಾನುಮಾಡಿ ಕಟ್ಟಿರುವ ಮಹದ್ದುರ್ಗವೇ ಆಗಿ ಕಂಡಿತು. ಅದರ ಗೋಡೆ ಕಲ್ಲುಬಂಡೆಗಳವಲ್ಲ, ಕೆಂಪು ಸುಣ್ಣಕಲ್ಲಿನ ಕಾಂಕ್ರೀಟನಿಂದ ನಿರ್ಮಿಸಿದ ಗೋಡೆಗಳಂತಿವೆ. ಅದರ ಕೋಟೆಕೊತ್ತಲುಗಳ ಮೇಲೆಲ್ಲಾ ಇನ್ನೂ ಒಂದು ವೈಶಿಷ್ಟ್ಯವನ್ನು ನೋಡಬಹುದು. ಅವೆಲ್ಲಾ ಹಿಮದ ಕೊರೆತಕ್ಕೆ ಸಿಕ್ಕಿ ವಿವಿಧ ರೂಪಗಳನ್ನು ತಾಳಿವೆ ಅವುಗಳ ಮೇಲೆ ಆನೆ, ಕರಡಿ, ಹುಲಿ, ನವಿಲು, ಜಿಂಕೆ, ಹಸು ಇತ್ಯಾದಿ ಪ್ರಾಣಿಗಳ ಮತ್ತು ಇನ್ನೂ ಏನೇನೊ ಜಂತುಗಳ ಆಕಾರಗಳನ್ನು ನೋಡಬಹುದು. ವಿವಿಧ ಮಂಟಪಗಳ, ವಿವಿಧ ಗೋಪುರಗಳ ಆಕಾರಗಳನ್ನೆಲ್ಲಾ ಅಲ್ಲಿ ನೋಡಬಹುದು. ನನಗೆ ತೋರಿತು : “ ಮನುಷ್ಯ ಇದುವರೆಗೆ ಕಂಡುಹಿಡಿದಿರುವ ಕಟ್ಟಡದ ಎಲ್ಲಾ ಡಿಸೈನುಗಳೂ ಮತ್ತು ಆತ ಮುಂದೆ ಕಂಡುಹಿಡಿಯಬಹುದಾದ ಇನ್ನೂ ಅನೇಕ ಡಿಸೈನುಗಳೂ ಎಲ್ಲವೂ ಇಲ್ಲಿವೆ ” ಎಂಬುದಾಗಿ. ಅದು ನಿಜ ವಾಗಿಯೂ ಒಂದು ವೈಶಿಷ್ಟ್ಯತೆಯಿಂದ ಕೂಡಿದ ಗಿರಿಯೇ, ಒಂದು ಅದ್ಭುತ ವಾದ ದುರ್ಗವೇ. ನನಗನಿಸಿತು : “ ಬಹುಶಃ ಸ್ವಯಂ ಬ್ರಹ್ಮನೇ ಇದನ್ನು ತನ್ನ ಕೈಯಿಂದ ನಿರ್ಮಿಸಿರಬೇಕು ” ಎಂಬುದಾಗಿ.

ಆ ಗಿರಿಯ ಶಿಖರದ ಪೂರ್ವ ಭಾಗದಲ್ಲಿ ಇನ್ನೊಂದು ವೈಶಿಷ್ಟ್ಯ. ಅಲ್ಲಿ ಹಿಮಪ್ರವಾಹ ಆ ರೀತಿಯಾಗಿ ಹರಿದುಬರುತ್ತದೆ, ಸಾಕ್ಷಾತ್ತಾಗಿ

ಕೈಲಾಸಪತಿ ಉತ್ತರಾಭಿಮುಖವಾಗಿ ಕುಳಿತಿದಾನೊ ಏನೊ, ಆತನ ಬಲ ಭಾಗಕ್ಕೆ ಗಂಗೆ ಹಿಮಪ್ರವಾಹರೂಪದಲ್ಲಿ ಆತನ ಕೇಶರಾಶಿಯಿಂದ ನೊರೆ ನೊರೆಯಾಗಿ ಇಳಿದು ಬರುತ್ತಿದಾಳೊ ಏನೊ ಎಂಬಂತೆ ಕಾಣಬರುತ್ತದೆ. ಆ ಪ್ರವಾಹ ೧೮,೪೦೦ ಅಡಿ ಎತ್ತರದಲ್ಲಿರುವ ಗೌರೀಕುಂಡಕ್ಕೆ ಬೀಳುತ್ತದೆ. ಆ ಭಾಗದ ದೃಶ್ಯ ಬಹಳ ಅದ್ಭುತವಾದುದಾಗಿದೆ. ಗೌರಿ ಆ ಕುಂಡದಲ್ಲೇ ದಿನಾ ಸ್ನಾನಮಾಡುತ್ತಾಳೆ ಎಂಬ ಪ್ರತೀತಿ ಇದೆ.

ಕೈಲಾಸಪರ್ವತದ ಸುತ್ತ ಒಟ್ಟು ಐದು ಬೌದ್ಧ ಆಶ್ರಮಗಳಿವೆ. ಪಶ್ಚಿಮದಲ್ಲಿ ನ್ಯಾನ್ರಿ ಅಥವಾ ಛುಕು ಗೊಂಫ, ಉತ್ತರದಲ್ಲಿ ದಿರಾಫು ಗೊಂಫ, ಪೂರ್ವದಲ್ಲಿ ಸುಂತುಲ್‌ಫುಕ್ ಅಥವಾ ದಿಂಡ್ರಿಫು ಗೊಂಫ, ದಕ್ಷಿಣ ದಲ್ಲಿ ಗೆಂಗ್ಟ ಗೊಂಫ ಮತ್ತು ಸಿಲಂಗ್ ಅಥವಾ ಸರ್ಲ್ಲಾಂಗ್ ಗೊಂಫ.

## ಥಮ್ಚುವಿನಿಂದ ನರ್ಸಂಗಿಗೆ

೧೫,೦೦೦ ಅಡಿ ಎತ್ತರದಿಂದ ೧೫,೦೫೦ ಅಡಿ ಎತ್ತರಕ್ಕೆ. ದೂರ ೯–೧೦ ಮೈಲಿ.

ಪ್ರಯಾಣ ಬೆಳಗಿನ ೮ ರಿಂದ ಅಪರಾಹ್ಣ ೧ ರ ವರೆಗೆ.

ತಾ|| ೫–೭–'೫೧, ಗುರುವಾರ.

ಇಂದು ಬೆಳಗ್ಗೆ ಎದ್ದು ನೋಡಿದಾಗ ಪ್ರಾತಃಕಾಲದ ಸೂರ್ಯ ಕೈಲಾಸಗಿರಿಗೆ ಒಂದು ಹೊಸ ಕಾಂತಿಯನ್ನು ಕೊಟ್ಟಿರುವಂತೆ ಕಂಡಿತು. ಅದು ಒಂದು ವಿಧವಾದ ಹೊಸ ತೇಜಸ್ಸಿನಿಂದ ಬಹಳ ಸ್ಪಷ್ಟವಾಗಿ ಎದ್ದು ಕಾಣುತ್ತಿತ್ತು. ಎಂಟು ಘಂಟೆ ಸಮಯಕ್ಕೆ ಥಮ್ಚುವಿನಿಂದ ಹೊರಟೆವು. ಹಾಗೇ ಮುಂದುವರಿಯುತ್ತ ಮುಂದುವರಿಯುತ್ತ ಕೈಲಾಸಗಿರಿಯ ತಪ್ಪಲಿಗೆ ಬರುವವರೆಗೆ ಅದು ವಿವಿಧ ಮನೋಹರ ದೃಶ್ಯಗಳನ್ನು ತಾಳುತ್ತಲೇ ಇತ್ತು. ಬಳಿಕ ದಾರಿ ಬಹಳ ದೂರದವರೆಗೆ ಮುಳ್ಳು ಪೊದೆಗಳ ಮೂಲಕವೇ ಮುಂದುವರಿಯಿತು. ನಾವು ಪರ್ವತದ ತಪ್ಪಲನ್ನು ಮುಟ್ಟಿದನಂತರ ಕೈಲಾಸಪತಿ (ಹಿಮಕಟ್ಟಿದ ಭಾಗ) ಮರೆಯಾಗಿ ನರ್ಸಂಗಿನ ಹತ್ತಿರ ಕಾಣಿಸಿ ಕೊಂಡ. ಇಲ್ಲಿ ಆತನನ್ನು ನೋಡಬೇಕಾದರೆ ಕತ್ತನ್ನು ತೊಂಬತ್ತು ಡಿಗ್ರಿಗೇ ತಿರುಗಿಸಬೇಕಾಯಿತು. ಇಲ್ಲಿ ಪರ್ವತ ಅತ್ಯಂತ ಕಡಿದು. ರಸ್ತೆಯ ಹತ್ತಿರವೇ ಇದ್ದ ನದಿಯ ಹತ್ತಿರ ಬಿಡಾರ ಬಿಟ್ಟೆವು.

ಇಲ್ಲಿಂದ ಒಂದು ಫರ್ಲಾಂಗು ದೂರದಲ್ಲಿ ಒಂದು ದೊಡ್ಡ ಧ್ವಜಸ್ತಂಭ ಕಾಣಿಸಿಕೊಂಡಿತು. ಅಲ್ಲಿ ಪ್ರತಿವರ್ಷವೂ ವೈಶಾಖ ಶುಕ್ಲ ಚತುರ್ದಶಿ

ಮತ್ತು ಪೂರ್ಣಿಮೆ ದಿನ ದೊಡ್ಡ ಜಾತ್ರೆ ನಡೆಯುವುದಂತೆ. ಬುದ್ಧ ಜನ್ಮವೆತ್ತಿದ್ದು ವೈಶಾಖ ಶುಕ್ಲ ಪೂರ್ಣಿಮೆಯ ದಿನ. ಆತ ಗೃಹವನ್ನು ತ್ಯಜಿಸಿ ಹೋದ್ದೂ, ನಿರ್ವಾಣವನ್ನು ಹೊಂದಿದ್ದೂ ಅದೇ ಪೂರ್ಣಿಮೆ ದಿನವೇ. ಆದ್ದರಿಂದ ಆ ಪೂರ್ಣಿಮೆ ಮೂರು ಸಲ ಪಾವಿತ್ರ್ಯತೆಯನ್ನು ಹೊಂದಿದ ದಿನ ಎಂದು ಹೆಸರು ಪಡೆದಿದೆ. ಆ ಜಾತ್ರೆಯ ದಿನ ಅನೇಕ ಮಂದಿ ಬೌದ್ಧರು ಅಲ್ಲಿಗೆ ಬರುತ್ತಾರಂತೆ. ಆ ಸಂದರ್ಭದಲ್ಲಿ ಹಳೆ ಧ್ವಜವನ್ನು ತೆಗೆದುಹಾಕಿ ಹೊಸದನ್ನು ಹಾರಿಸುತ್ತಾರಂತೆ.

ನಾವು ನರ್ಸಂಗಿನಲ್ಲಿ ಇಳಿದುಕೊಂಡಿದ್ದ ಜಾಗ ಕೈಲಾಸಪರ್ವತದ ಕಂದಕಕ್ಕೆ ಹೆಬ್ಬಾಗಿಲೊ ಏನೊ ಎಂಬಂತೆ ತೋರುತ್ತಿತ್ತು. ಇದೂ ಬಹಳ ಸುಂದರವಾದ ಜಾಗವೇ. ಇಲ್ಲಿಂದ ಕೈಲಾಸಪತಿ ಒಂದು ದಿವ್ಯ ಜ್ಯೋತಿಯೇ ಆಗಿ ತನ್ನ ದುರ್ಗದ ಮೇಲೆ ಕುಳಿತಿರುವನೊ ಏನೊ ಎಂಬಂತೆ ಕಾಣುತ್ತದೆ.

## ನರ್ಸಂಗಿನಿಂದ ದಿರಾಫುವಿಗೆ

೧೫,೦೫೦ ಅಡಿ ಎತ್ತರದಿಂದ ೧೬,೪೦೦ ಅಡಿ ಎತ್ತರಕ್ಕೆ. ದೂರ ೯-೧೦ ಮೈಲಿ.

ಪ್ರಯಾಣ ಬೆಳಗಿನ ೯-೩೦ ರಿಂದ ಅಪರಾಹ್ನ ೨-೩೦ ರ ವರೆಗೆ.

ತಾ|| ೬-೭-'೫೧, ಶುಕ್ರವಾರ.

ಇಂದು ನಾವು ನದಿಯ ಎಡ ಭಾಗದಲ್ಲಿ ಮುಂದುವರಿಯಲಾರಂಭಿಸಿದೆವು. ನದಿಯ ಬಲಗಡೆ ಕೋಟೆಯಂತೆ ಎದ್ದಿದ್ದ ಬೆಟ್ಟಗಳ ಮೇಲೆ ಹುಲಿ, ಸಿಂಹ, ಆನೆ, ನವಿಲು ಇವೇ ಮೊದಲಾದ ಪ್ರಾಣಿಗಳ ಮತ್ತು ಇನ್ನೂ ಅನೇಕ ವಿಧದ ವಸ್ತುಗಳ ಆಕಾರಗಳು ಕಾಣಿಸಿಕೊಳ್ಳಲಾರಂಭಿಸಿದುವು. ಹಾಗೇ ನಾಲ್ಕೈದು ಮೈಲಿ ಮುಂದುವರಿದನಂತರ ಇದುವರೆಗೆ ಮರೆಯಾಗಿದ್ದ ಕೈಲಾಸಪತಿ ಮತ್ತೆ ಕಾಣಿಸಿಕೊಂಡ. ಈಗ ಆ ಹಿಮ ಕಟ್ಟಿದ ಭಾಗ ಅರ್ಧಚಂದ್ರಾಕೃತಿಯನ್ನು ತಾಳಿತ್ತು. ಆ ಸುಂದರ ದೃಶ್ಯವನ್ನು ಸ್ವಲ್ಪ ಹೊತ್ತು ನೋಡುತ್ತಲೇ ಕುಳಿತಿದ್ದು ಮತ್ತೆ ಮುಂದಕ್ಕೆ ಪ್ರಯಾಣ ಬೆಳಸಿದೆವು.

ಸ್ವಲ್ಪ ದೂರ ಮುಂದುವರಿದನಂತರ ಆಳಿಲಿನ ಜಾತಿಗೆ ಸೇರಿದ ಮತ್ತು ಬೆಕ್ಕಿನಷ್ಟು ದಪ್ಪವಿರುವ ಒಂದು ಕೆಂಪು ಬಣ್ಣದ ಪ್ರಾಣಿ ಕಾಣಿಸಿಕೊಂಡಿತು,

ಅದು ಇಲ್ಲಿನ ಒಂದು ವಿಧದ ಇಲಿಯಂತೆ. ಆಗ ಅನಿಸಿತು : " ಮಾನಸ ಸರೋವರದ ಹತ್ತಿರ ಕಂಡ ಮತ್ತು ನಮ್ಮ ಕಡೆ ಇರುವ ಪುಟ್ಟ ಇಲಿಗಳ ಮೇಲೆ ಅಷ್ಟು ಭಾರಿ ಆಳು ಗಣೇಶ ಕುಳಿತುಕೊಂಡರೆ ಅವು ಜೀವಸಹಿತ ಉಳಿಯಬಲ್ಲವೆ? ಬಹುಶಃ ಇದು ಒಂದೆರಡು ಹೆಜ್ಜೆಯನ್ನಾದರೂ ಇಟ್ಟರೂ ಇಡಬಲ್ಲದು. ಇದನ್ನು ರಾಜ ಇಲಿ ಅಂತ ಕರೆದರೆ ಅತಿಶಯೋಕ್ತಿ ಯೇನೂ ಆಗಲಾರದು!" ಇನ್ನೂ ಸ್ವಲ್ಪ ದೂರ ಮುಂದುವರಿದನಂತರ ಅದು ತೋಡಿದ್ದ ಬಿಲವೂ ಕಾಣಿಸಿಕೊಂಡಿತು. ಒಂದು ಚಿಕ್ಕ ಮಗು ಅಂಬೆಗಾಲಿಕ್ಕಿ ಸುಲಭವಾಗಿ ಅದರೊಳಕ್ಕೆ ಹೋಗಿಬಿಡಬಹುದಾಗಿತ್ತು.

ಹಾಗೆಯೇ ಮುಂದುವರಿದು ನದಿಯ ಎಡ ದಡದಿಂದ ಬಲ ದಡಕ್ಕೆ ಬಂದು ದಿರಾಪು ಗೊಂಫವನ್ನು ಮುಟ್ಟಿದೆವು. ಆ ಗೊಂಫದ ಅಧ್ಯಕ್ಷರು ನಮಗೆ ಸುಸ್ವಾಗತವಿತ್ತು ಒಳಕ್ಕೆ ಬರಮಾಡಿಕೊಂಡರು. ಅವರು ಬಹಳ ಒಳ್ಳೆ ಸಾಧು. ನಾವು ಇಳಿದುಕೊಳ್ಳಲು ಮಾಡಲು ಎಲ್ಲಾ ಅನುಕೂಲತೆ ಗಳನ್ನೂ ಕಲ್ಪಿಸಿಕೊಟ್ಟರು. ಅವರು ಹಾಗೆ ಮಾಡಿದ್ದು ಒಂದು ದೊಡ್ಡ ಉಪಕಾರವನ್ನೇ ಮಾಡಿಕೊಟ್ಟಂತಾಯಿತು. ಇಲ್ಲದಿದ್ದರೆ— ಅಲ್ಲಿ ವಿಪರೀತ ಚಳಿಯಂತೆ— ಟೆಂಟಿನಲ್ಲಿ ರಾತ್ರಿಯನ್ನು ಕಳೆದು ಸುಮ್ಮನೆ ನಡುಗಿ ಸಾಯ ಬೇಕಾಗಿತ್ತು. ಆ ಅಧ್ಯಕ್ಷರು ನಾನು ಯಾರು ಎಂತು ಎಂದು ನಮ್ಮ ಗೈಡನ್ನು ಕೇಳಿ ತಿಳಿದುಕೊಂಡರು. ಅವರಿಗೆ ಟಿಬೆಟ್ ಭಾಷೆ ವಿನಾ ಬೇರೆ ಯಾವ ಭಾಷೆಯೂ ಬಾರದೆ ಇದ್ದುದರಿಂದ ಅವರು ನಮ್ಮ ಗೈಡಿಗೆ ಆ ಭಾಷೆಯಲ್ಲೇ ಹೇಳಿದರು : " ನಾನು ಶ್ರೀರಾಮಕೃಷ್ಣರ ಮತ್ತು ಸ್ವಾಮಿ ವಿವೇಕಾನಂದರ ಸಂಬಂಧವಾಗಿ ಕೇಳಿದೇನೆ. ಅವರ ಮಿಷನ್ನಿಗೆ ಸೇರಿದ ಒಬ್ಬ ಸನ್ಯಾಸಿಯನ್ನು ಇಂದು ನೋಡಿ ನನಗೆ ಬಹಳ ಆನಂದ ಆಗಿಬಿಟ್ಟಿದೆ. ಒಂದೆರಡು ವರ್ಷ ನಮ್ಮೊಡನೆ ಇವರು ಇಲ್ಲೇ ಇದ್ದುಬಿಡಲಿ." ನಾನು ನಮ್ಮ ಗೈಡಿನ ಮೂಲಕ ಅವರಿಗೆ ತಿಳಿಸಿದೆ : "ಇಲ್ಲೇ ಇರಲು ನೀವು ನನಗೆ ಆಮಂತ್ರಣ ನೀಡಿದುದಕ್ಕಾಗಿ ನಿಮಗೆ ಅನಂತ ವಂದನೆಗಳು. ನನಗೇನೊ ಇಚ್ಛೆಯಿದೆ. ಆದರೆ ಸದ್ಯ ಸಾಧ್ಯವಾಗುವುದಿಲ್ಲ. ನಿಮ್ಮನ್ನು ಏನೇನೊ ಕೇಳಬೇಕು ಅಂತ ಅನಿಸುತ್ತಿದೆ. ಆದರೆ ಭಾಷೆ ಅಡ್ಡಲಾಗಿ ಬಂದು ನಿಂತಿದೆ." ಅವರು ಸ್ವಲ್ಪ ನಕ್ಕರು. ಒಳಿಕ ಅವರು ನನ್ನ ವಾಸಕ್ಕೆ ಒಂದು ಕೋಣೆ

ತಾ॥ ೫-೭-೧೯೫೧.



ನರ್ಸಂಗಿನ ಹತ್ತಿರದಿಂದ ಕೈಲಾಸಗಿರಿ
ನಮ್ಮ ಪಾರ್ಟಿಯ ಕೆಲವರು

೭-೭-೧೯೫೧.



ಗೌರೀಕುಂಡ.

೭-೭-೧೯೫೧.



ದಿರಾಪ್ಪು ಗೊಂಫದಿಂದ ಕೈಲಾಸಪತಿ.

ಟೀಯನ್ನು ತಂದು ಇಡಿಸಿದರು. ಆಗ ನಾನು ಅವರ ಕ್ಷಮಾಪಣೆ ಬೇಡ ಬೇಕಾಯಿತು. ಅವರಿಗೆ ತಿಳಿಸಿದೆ: "ಟೀ ಕಾಫಿಗಳ ಸಂಬಂಧವಾಗಿ ಬಾಲ್ಯ ದಲ್ಲೇ ವೈರಾಗ್ಯ ಬಂದು ಸುಮಾರು ಮೂವತ್ತು ವರ್ಷಗಳ ಹಿಂದೆಯೇ ಅವನ್ನು ವರ್ಜಿಸಿಬಿಟ್ಟಿದೇನೆ." ಅದನ್ನು ಕೇಳಿ ಅವರಿಗೆ ಇನ್ನೂ ಆಶ್ಚರ್ಯ ವಾಯಿತು. ಅವರು ಹೇಳಿದರು: "ನಾವು ದಿನಾ ಒಂದೊಂದು ಹಂಡೆ!"

ನಮ್ಮ ನಮ್ಮ ಹಾಸಿಗೆ ಬಟ್ಟೆ ಬರೆ ಎಲ್ಲೆಲ್ಲಿ ಇರಬೇಕು ಎಂಬುದರ ವ್ಯವಸ್ಥೆ ಆದನಂತರ ಎಲ್ಲರೂ ಬಂದು ಆ ಗೊಂಫದ ಮೇಲ್ಮೆಚ್ಚಿನಲ್ಲಿ ಒಂದು ಕಡೆ ಸೇರಿದೆವು. ಅಲ್ಲಿಂದ ಕೈಲಾಸಪತಿ ಎಷ್ಟು ಮನೋಹರವಾಗಿ ಕಾಣಿಸ ಲಾರಂಭಿಸಿದ ಏನು ಕತೆ! ಕಣ್ಣು ಬೇರೆ ಕಡೆಗೆ ತಿರುಗಲೊಲ್ಲೆ ಎಂದಿತು. ಆ ಹಿಮ ಕಟ್ಟಿದ ಭಾಗ—ವಿರಾಟ್ ಹಿಮಲಿಂಗ—ಈ ಗೊಂಫದ ಮಟ್ಟ ದಿಂದ ಮೇಲಕ್ಕೆ ಎದ್ದಿರುವಂತೆ ಕಂಡಿತು. ದಿರಾಫು ಗೊಂಫದ ಎತ್ತರ ೧೬,೪೦೦ ಅಡಿ. ಕೈಲಾಸಗಿರಿಯ ಎತ್ತರ ೨೨,೦೨೮ ಅಡಿ. ಆದ್ದರಿಂದ ನಮ್ಮೆದುರಿಗೆ ಇದ್ದ ಆ ವಿರಾಟ್ ಲಿಂಗದ ಎತ್ತರ ೫೬೨೮ ಅಡಿ, ಎಂದರೆ ಒಂದು ಮೈಲಿ ಗಿಂತಲೂ ಎತ್ತರವಾದ ಲಿಂಗ. ಅದರ ಎರಡು ಕಡೆಯೂ ಎರಡು ಬೆಟ್ಟಗಳು ಕಾವಲುಗಾರರ ಹಾಗೆ ನಿಂತಿದ್ದುವು. ಆ ಹಿಮಲಿಂಗದ ಮೇಲ್ಭಾಗ ಆ ರೀತಿಯಾಗಿ ತೋರಲಾರಂಭಿಸಿತು ಸಾಕ್ಷಾತ್ತಾಗಿ ಸರ್ಪ ತನ್ನ ಹೆಡೆ ಬಿಚ್ಚಿ ಶಿವಲಿಂಗಕ್ಕೆ ಮರೆಕಟ್ಟಿ ನಿಂತಿರುವುದೊ ಏನೊ ಎಂಬಂತೆ. ಅದು ನಾಲಗೆಯನ್ನು ನೀಡಿರುವಂತೆಯೂ ಮತ್ತು ತನ್ನ ಎರಡು ಎವೆಯಿಕ್ಕದ ಕಣ್ಣುಗಳಿಂದ ಸರ್ಪಗಾವಲು ಕಾಯುತ್ತಿರುವಂತೆಯೂ ಕಂಡಿತು. ಆ ಹಿಮ ಕಟ್ಟಿರುವ ಭಾಗ ಈ ಸ್ಥಳದಿಂದ ಸುಮಾರು ಒಂದು ಮೈಲಿ ದೂರದಲ್ಲಿರು ವಂತೆ ಕಂಡಿತು. ಕೈಲಾಸಪತಿಯನ್ನು ಸ್ಪಷ್ಟವಾಗಿ ನೋಡಲು ಇದೇ ಬಹಳ ಸೊಗಸಾದ ಜಾಗವಂತೆ. ನಾನು ನಮ್ಮ ಗೈಡನ್ನು ಕೇಳಿದೆ: "ನಾವು ಆ ಹಿಮಕಟ್ಟಿದ ಭಾಗಕ್ಕೇ ಸಾಯಂಕಾಲ ಹೋಗಿಬರೋಣವೆ ?" ಆತ ಹೇಳಿದ: "ಸಾಧ್ಯವಿಲ್ಲ. ಬೇಕಾದರೆ ಸ್ವಲ್ಪ ದೂರವೇನೊ ಆ ಕಡೆಗೆ ಹೋಗಿಬರಬಹುದು. ಅಗೋ ನೋಡಿ, ಅಲ್ಲಿ ಹಿಮ ಕೆಳಗೆ ಬಿದ್ದಿದೆಯಲ್ಲ, ಅಲ್ಲಿಂದಾಚೆಗೆ ಮುಂದುವರಿಯಲಾಗೋದೇ ಇಲ್ಲ. ಆ ಸ್ಥಳದಲ್ಲಿ ಪರ್ವತ ತೊಂಬತ್ತು ಡಿಗ್ರಿ ಕೋನದಲ್ಲಿ ಮೇಲಕ್ಕೆ ಎದ್ದಿದೆ. ಆ ಸ್ಥಳದವರೆಗೆ ಹೋಗಲು ಪ್ರಯತ್ನಿಸುವುದೂ ಅಪಾಯಕರವೆ. ಯಾವ ನಿಮಿಷದಲ್ಲಿ ಹಿಮ ಮೇಲಿಂದ ಕಳಚಿಬೀಳುವುದೊ ಹೇಳಲಾಗುವುದಿಲ್ಲ. ಆದ್ದರಿಂದ

ಆ ಪ್ರಯತ್ನಕ್ಕೆ ಕೈಹಾಕದೆ ಇಲ್ಲಿಂದಲೇ ನಿಮ್ಮ ಪೂಜೆ, ಪುರಸ್ಕಾರ, ಪ್ರಾರ್ಥನೆ ಎಲ್ಲವನ್ನೂ ಕೈಲಾಸಪತಿಗೆ ಅರ್ಪಿಸಿಬಿಡಿ."

ಕೈಲಾಸ-ಮಾನಸಸರೋವರವನ್ನು ದರ್ಶನಮಾಡಬೇಕೆಂಬ ಆಸೆ ಇಂದು ಸಂಪೂರ್ಣವಾಗಿ ಸಫಲಗೊಂಡಿತು. ಆದ್ದರಿಂದ ನಮ್ಮ ಆನಂದ ಇಂದು ಪರಮಾವಧಿಯನ್ನು ಮುಟ್ಟಿಬಿಟ್ಟಿತು. ಸಾಯಂಕಾಲದವರೆಗೂ ಆ ಅದ್ಭುತ ದೃಶ್ಯವನ್ನು ನೋಡುತ್ತಲೇ ಅಲ್ಲೇ ಕುಳಿತುಬಿಟ್ಟೆ. ನನ್ನ ಶರೀರದ ಪ್ರತಿಯೊಂದು ಅಣುರೇಣುವೂ ಕೈಲಾಸಪತಿಯ ಆ ಅದ್ಭುತ ರೂಪನ್ನು ತನ್ನ ಅಂತರ್ಯದಲ್ಲಿ ಚಿರಮುದ್ರಿತವನ್ನಾಗಿ ಮಾಡಿಕೊಳ್ಳಲು ಪ್ರಯತ್ನಿಸಿತು. ಊಟತಿಂಡಿಯ ಯೋಚನೆಯೇ ಮರೆತುಹೋಯಿತು. ಇಂದು ಮತ್ತೆ ಸಕಲ ಜೀವರಾಶಿಗಳನ್ನು ಸ್ಮರಿಸಿಕೊಂಡು ಅವರೆಲ್ಲರಿಗೂ ಕೈಲಾಸಪತಿಯ ದರ್ಶನ ಆಗಲೆಂದು ಪ್ರಾರ್ಥನೆ ಮಾಡಿದೆ. ಬಳಿಕ ಶ್ರೀ ಶಂಕರಾಚಾರ್ಯರನ್ನು ಜ್ಞಾಪಿಸಿಕೊಂಡು ಅವರ ನಿರ್ವಾಣಷಟ್ಕವನ್ನು ಮನನಮಾಡಲಾರಂಭಿಸಿದೆ.

**ನಿರ್ವಾಣಷಟ್ಕಮ್ :**

ಬುದ್ಧಿಮನ ಚಿತ್ತಹಂಕಾರ ನಾನಲ್ಲ ;
ಕಣ್ಣುಕಿವಿ ಮೂಗಲ್ಲ, ನಾಲಗೆಯುಮಲ್ಲ ;
ನಭವಲ್ಲ, ಧರೆಯಲ್ಲ, ಶಿಖಿವಾಯುವಲ್ಲ ;
ಸಚ್ಚಿದಾನಂದಾತ್ಮ ಶಿವ ನಾನು ನಾನು !

ಪಂಚವಾಯುಗಳಲ್ಲ, ಪ್ರಾಣ ನಾನಲ್ಲ ;
ಸಪ್ತಧಾತುಗಳಲ್ಲ, ಕೋಶವೈದಲ್ಲ ;
ಕರ್ಮಾಂಗ ವಿಷಯೇಂದ್ರಿಯಂಗಳಾನಲ್ಲ ;
ಸಚ್ಚಿದಾನಂದಾತ್ಮ ಶಿವ ನಾನು ನಾನು !

ದ್ವೇಷರಾಗಗಳಿಲ್ಲ ಲೋಭಮೆನಗಿಲ್ಲ ;
ಮೋಹಮದ ಮಾತ್ಸರ್ಯ ಭಾವಮೆನಗಿಲ್ಲ ;
ಧರ್ಮಾರ್ಥ ಕಾಮಾದಿ ಮೋಕ್ಷ ನಾನಲ್ಲ ;
ಸಚ್ಚಿದಾನಂದಾತ್ಮ ಶಿವ ನಾನು ನಾನು !

ಪಾಪಪುಣ್ಯಗಳಲ್ಲ, ಸುಖದುಃಖವಲ್ಲ;
ಮಂತ್ರತೀರ್ಥಗಳಲ್ಲ, ವೇದ ಮಖವಲ್ಲ;
ಭೋಜ್ಯ ಭೋಜನವಲ್ಲ, ಭೋಕ್ತ ನಾನಲ್ಲ;
ಸಚ್ಚಿದಾನಂದಾತ್ಮ ಶಿವ ನಾನು ನಾನು!

ಜಾತಿ ಭೇದಗಳಿಲ್ಲ, ಮೃತ್ಯು ಭಯವಿಲ್ಲ;
ಜನ್ಮ ಮೃತ್ಯುಗಳಿಲ್ಲ, ತಂದೆತಾಯಿಲ್ಲ;
ಬಂಧು ಸಖರಿಲ್ಲ, ಗುರುಶಿಷ್ಯರಾರಿಲ್ಲ;
ಸಚ್ಚಿದಾನಂದಾತ್ಮ ಶಿವ ನಾನು ನಾನು!

ನಿರ್ವಿಕಲ್ಪನು ನಾ ನಿರಾಕಾರ ನಾನು!
ಸರ್ವೇಂದ್ರಿಯಾತೀತ ಸರ್ವತ್ರ ನಾನು;
ಕಾಲದೇಶಾತೀತ ವಿಶ್ವವಿಭು ನಾನು!
ಸಚ್ಚಿದಾನಂದಾತ್ಮ ಶಿವ ನಾನು ನಾನು! *

ಮನಸ್ಸು ಸಾಕಾರ ಎಲ್ಲೆಯನ್ನು ಬಿಟ್ಟು ನಿರಾಕಾರ ಎಲ್ಲೆಯಲ್ಲಿ ವಿಹರಿಸಲಾರಂಭಿಸಿತು. ಬಳಿಕ ಸ್ವಾಮಿ ವಿವೇಕಾನಂದ ವಿರಚಿತ "ಸಮಾಧಿ" ಎಂಬ ಕವನ ಜ್ಞಾಪಕಕ್ಕೆ ಬಂತು:

ಅಲ್ಲಿ ಶಶಿ ಸೂರ್ಯರಿಲ್ಲ;
ಅಲ್ಲಿ ನಿಶೆ ದಿನಗಳಿಲ್ಲ;
ಆ ಮಹಾ ಶೂನ್ಯದೊಳು
ಬಿಂಬ ಬ್ರಹ್ಮಾಂಡಮಹ!
ತೇಲುತಿದೆ ಛಾಯೆಯಂತೆ!

ಸುಳಿಮನದ ಶೂನ್ಯದಲ್ಲಿ
ಅಚಿರಮಾದೀ ವಿಶ್ವವು
ಮುಳುಗುತಿದೆ ತೇಲುತಿದೆ
ಮುಳುಮುಳುಗಿ ತೇಲಿ ಸದಾ
'ಅಹಮಸ್ಮಿ' ಸೆಳವಿನಲ್ಲಿ!

---

* ಶ್ರೀ ಕುವೆಂಪು ಅವರ ಅನುವಾದ.

ಮೆಲುಮೆಲನೆ ಆ ಛಾಯೆಯು
ಬ್ರಹ್ಮಾಂಡ ಗತವಾಗೆ ತಾಂ
'ನಾನಿಹೆನು' 'ನಾನಿಹೆನು'
ಎಂಬಾ ಪ್ರವಾಹವೊಂದೇ
ಪ್ರವಹಿಪುದು ಬಿಡುವಿಲ್ಲದೆ!

ಅಹಹ! ಅದು ನಡೆಗೆಟ್ಟಿತು!
ಹೊನಲು ಮುಂಬರಿಯದಿಹುದು!
ಶೂನ್ಯ ತಾಂ ಶೂನ್ಯಗತ!
ವಾಙ್ಮನಾತೀತಮದು!
ಸಿದ್ಧನಿಗೆ ವೇದ್ಯಮಹುದು!*

ಬಳಿಕ ಶ್ರೀಕುವೆಂಪು ಅವರ "ಬಲ್ಲವರದಾರು!" ಎಂಬ ಕವನ ಜ್ಞಾಪಕಕ್ಕೆ ಬಂತು.

ಏನಿಲ್ಲ! ಏನಿಲ್ಲವೆಂಬುದೂ ಅಲ್ಲಿಲ್ಲ!
ಏನದೆಂಬುದನರಿವರಾರೊಬ್ಬರೂ ಇಲ್ಲ!
ಕರಿದಿಲ್ಲ; ಬಿಳಿದಿಲ್ಲ; ದಿನವಿಲ್ಲ, ನಿಶೆಯಿಲ್ಲ;
ಅರಿವಿಲ್ಲ, ಮನವಿಲ್ಲ; ಅಳಿವಿಲ್ಲ, ಉಳಿವಿಲ್ಲ;
ಶೂನ್ಯಮಲ್ಲವು! ಸರ್ವವೂ ನೇತಿ 'ನೇತಿ' 'ನೇತಿ'!
ಕಾಲದೇಶಗಳಿಲ್ಲ! ಸಾವುಬಾಳುಗಳಿಲ್ಲ!
ನಾನಿಲ್ಲ; ನೀನಿಲ್ಲ; ಸರ್ವವೂ ಮೌನ!
ತಿಮಿರ ಬೆಳಕಿನೊಳಡಗಿ, ಬೆಳಕು ತಿಮಿರದೊಳವಿತು,
ಭಾವ ಶೂನ್ಯವ ಸೇರಿದುದು ಐಕ್ಯಮಾಗಿ!
ರವಿಯಿಲ್ಲ, ಶಶಿಯಿಲ್ಲ; ನಭವಿಲ್ಲ, ಧರೆಯಿಲ್ಲ;
ರಂಜಿಸುವ ಉಡುಗಣದ ಸೌಂದರ್ಯವಿಲ್ಲ!
ತುದಿಯಿಲ್ಲ, ಮೊದಲಿಲ್ಲ; ಒಂದಿಲ್ಲ ಎರಡಿಲ್ಲ;
ಏನು ಏನಾಗಿರ್ದುದೋ ಬಲ್ಲವರದಾರು?
ಭಾವದೊಳಭಾವವೋ? ಶೂನ್ಯದೊಳಶೂನ್ಯವೋ?

* ಶ್ರೀ ಕುವೆಂಪು ಅವರ ಅನುವಾದ.

ಅರಿವಿನಾಚೆಯ ತೀರ ಬರಿಮೌನ, ಮೌನ!
ಜ್ಞಾನ ತಾನಲ್ಲಿಲ್ಲ; ಜ್ಞೇಯಮದುಮಿಲ್ಲ;
ಜ್ಞಾನ ಜ್ಞೇಯಗಳೆಲ್ಲ ಜ್ಞಾತನೊಳು ಸೇರೆ
ಏನು ಏನಾಗಿರ್ದುದೋ ಬಲ್ಲವರದಾರು?

ಈ ಕವನಗಳ ಭಾವನೆ ನನ್ನನ್ನು ಭಾವನಾರಾಜ್ಯದಲ್ಲಿ ಬಹಳ ಹೊತ್ತಿನವರೆಗೆ ಮುಳುಗಿಸಿ ಇಟ್ಟುಬಿಟ್ಟುವು. ಬಳಿಕ ಮೈ ತಿಳಿದು ನೋಡು ತ್ತೇನೆ ಆಗಲೆ ರಾತ್ರಿಯಾಗಿಬಿಟ್ಟು ಚಂದ್ರೋದಯವಾಗಿದೆ. ಸ್ವಲ್ಪ ಹೊತ್ತಿನಲ್ಲೆ ಚಂದ್ರ ಸ್ವಚ್ಛ ಆಕಾಶದಲ್ಲಿ ಗಿರಿಶಿಖರಗಳ ಮೇಲೆ ಏರಿಬಂದು ತನ್ನ ತಂಪು ಕಿರಣಗಳನ್ನು ಕೈಲಾಸಪತಿಯ ಮೇಲೆ ಚೆಲ್ಲಲಾರಂಭಿಸಿದ. ಆಹ! ಆಗ ಕೈಲಾಸಪತಿ ಎಷ್ಟು ರಮ್ಯವಾಗಿ ಕಾಣಲಾರಂಭಿಸಿದ ಏನು ಕತೆ! "ಹೊರಗೆ ಕುಳಿತೇ ಇಡೀ ರಾತ್ರಿಯನ್ನು ಕಳೆದುಬಿಡೋಣವೆ?" ಅಂತ ಅನಿಸಿತು. ಆದರೆ ಒಡನೇ ಚಳಿ ಬಂದು ಹೇಳಿತು: "ನೀನು ಹಾಗೆ ಮಾಡುವುದಾದರೆ ಇಲ್ಲೇ ನಿನಗೆ ಮಹಾಸಮಾಧಿ!" ನನಗೆ ಆ ವಿಧದ ಸಮಾಧಿ ಬೇಕಾಗಿರಲಿಲ್ಲ. ಆದ್ದರಿಂದ ರೂಮಿಗೆ ಹಿಂದಿರುಗಿ ಬಂದು ಆಗಾಗ ಎದ್ದುಹೋಗುತ್ತ ಕೈಲಾಸಪತಿಯ ದರ್ಶನಮಾಡಿ ಬರಲಾರಂಭಿಸಿದ್ದೆ ಕೊನೆಗೆ ನಿದ್ರಾದೇವಿ ಬಂದು ನನ್ನನ್ನು ನಿತ್ಯಸಮಾಧಿ ಸ್ಥಿತಿಗೆ ಒಯ್ದು ಬಿಟ್ಟಳು.

## ದಿರಾಫುವಿನಿಂದ ದಿಂಡ್ರಿಫುವಿಗೆ

೧೬,೪೦೦ ಅಡಿ ಎತ್ತರದಿಂದ ೧೬,೨೦೦ ಅಡಿ ಎತ್ತರಕ್ಕೆ. ದೂರ ೧೨ ಮೈಲಿ.
ಪ್ರಯಾಣ ಬೆಳಗಿನ ೮–೧೫ ರಿಂದ ಅಪರಾಹ್ನ ೨–೩೦ ರ ವರೆಗೆ.
ತಾ|| ೭–೭–'೫೧, ಶನಿವಾರ.

ಇಂದಿನ ಬೆಳಗ್ಗೆ ಎದ್ದಾಗ ಘಂಟೆ ನಾಲ್ಕು. ಚಳಿ ಹೊರಗಡೆ ಹೇಳ ತೀರದಷ್ಟು ಕೊರೆಯುತ್ತಿತ್ತು. ಆದರೂ ಸರಿಯಾದ ಉಡುಪುಗಳನ್ನು ಹಾಕಿಕೊಂಡು ಸೂರ್ಯೋದಯವಾಗುವವರೆಗೆ ಹೊರಗಡೆ ಕುಳಿತು ಕೈಲಾಸಪತಿಯನ್ನು ಎವೆಯಿಕ್ಕದೆ ನೋಡುತ್ತಿದ್ದೆ. ಬಳಿಕ ತೈತ್ತಿರೀಯ ಉಪನಿಷತ್ತನ್ನು ಸ್ವರಸಹಿತ ಉಚ್ಚಾರಣೆಮಾಡಿ ವೇದಗಳ ಕಾಲದ ಎಲ್ಲಾ ಋಷಿಗಳನ್ನೂ ಜ್ಞಾಪಿಸಿಕೊಂಡೆ. ಬಳಿಕ ಅವರು ನಮ್ಮ ಪಾಲಿಗೆ ಬಿಟ್ಟು ಹೋಗಿರುವ ಆಸ್ತಿ, ಎಂದೆಂದಿಗೂ ನಾಶವಾಗದ ಆಸ್ತಿ, ನಮ್ಮನ್ನು ಸಂಸಾರ

ಬಂಧನದಿಂದ ವಿಮೋಚನೆಮಾಡತಕ್ಕ ಆಸ್ತಿ, ನಮ್ಮನ್ನು ಈ ಜನ್ಮದಲ್ಲೇ ಮುಕ್ತರನ್ನಾಗಿ ಮಾಡುವ ಶಕ್ತಿಯುಳ್ಳ ಆಸ್ತಿ, ನಮ್ಮಲ್ಲಿ ಶಕ್ತಿ ಸಾಹಸ ಸ್ಫೂರ್ತಿ ಇವನ್ನು ತುಂಬುವ ಶಕ್ತಿಯುಳ್ಳ ಆಸ್ತಿ, ನಮ್ಮನ್ನು ನಿಜವಾಗಿಯೂ ಮಾನವರನ್ನಾಗಿ ಮಾಡುವ ಶಕ್ತಿಯುಳ್ಳ ಆಸ್ತಿ, ನಮ್ಮನ್ನು ಪುರುಷಸಿಂಹರನ್ನಾಗಿ ಮಾಡುವ ಶಕ್ತಿಯುಳ್ಳ ಆಸ್ತಿ, ನಮ್ಮನ್ನು ಸರ್ವಜ್ಞರನ್ನಾಗಿ ಮಾಡುವ ಶಕ್ತಿಯುಳ್ಳ ಆಸ್ತಿ, ಇಡೀ ಮಾನವಕೋಟಿಯನ್ನೇ ಉದ್ಧಾರ ಮಾಡುವ ಶಕ್ತಿಯುಳ್ಳ ಆಸ್ತಿ, ನಮಗೂ ಸುಖ ಶಾಂತಿ ಆನಂದವನ್ನು ದೊರಕಿಸಿಕೊಂಡು ಇತರರಿಗೂ ಅವನ್ನೇ ದೊರಕಿಸಿಕೊಡುವಂತೆ ನಮ್ಮನ್ನು ಪ್ರೇರೇಪಿಸುವ ಶಕ್ತಿಯುಳ್ಳ ಆಸ್ತಿ, ನಮ್ಮನ್ನು ಸಚ್ಚಿದಾನಂದ ಸಾಗರದಲ್ಲಿ ಅದ್ದಿ ಮುಳುಗಿಸಿ ತೇಲಿಸುವ ಶಕ್ತಿಯುಳ್ಳ ಆಸ್ತಿ, ನಮ್ಮನ್ನು ಮರ್ತ್ಯಲೋಕದ ದೇವತೆಗಳನ್ನಾಗಿ ಮಾಡುವ ಶಕ್ತಿಯುಳ್ಳಆಸ್ತಿ, ತೀವ್ರ ವೈರಾಗ್ಯವನ್ನು ಗಳಿಸಿಕೊಳ್ಳುವಂತೆ ಪ್ರೇರೇಪಿಸಿ ನಮ್ಮನ್ನು ಬ್ರಹ್ಮಜ್ಞರನ್ನಾಗಿ ಮಾಡುವ ಶಕ್ತಿಯುಳ್ಳ ಆಸ್ತಿ, "ಪ್ರಸ್ಥಾನತ್ರಯ"—ದಶೋಪನಿಷತ್ತುಗಳು, ಬ್ರಹ್ಮಸೂತ್ರ, ಭಗವದ್ಗೀತೆ—ಜ್ಞಾಪಕಕ್ಕೆ ಬಂದುವು. ಬಳಿಕ ದಶೋಪನಿಷತ್ತು—ಈಶ, ಕೇನ, ಕಠ, ಮುಂಡಕ, ಮಾಂಡೂಕ್ಯ, ಐತರೇಯ, ತೈತ್ತಿರೇಯ, ಪ್ರಶ್ನ, ಛಾಂದೋಗ್ಯ, ಬೃಹದಾರಣ್ಯಕ—ಇವುಗಳ ಉಪದೇಶ ನನ್ನ ಮನಸ್ಸಿನ ಮುಂದೆ ಬಂದುಹೋದುವು. ಹಾಗೇ ಬ್ರಹ್ಮಸೂತ್ರದ ಮತ್ತು ಭಗವದ್ಗೀತೆಯ ಉಪದೇಶಗಳೂ ನನ್ನ ಮನಸ್ಸಿನ ಮುಂದೆ ಸುಳಿದುಹೋದುವು. ಬಳಿಕ ಇವುಗಳ ಮೇಲೆ ಭಾಷ್ಯ ಬರೆದ ಶ್ರೀ ಶಂಕರಾಚಾರ್ಯರು, ಶ್ರೀ ರಾಮಾನುಜಾಚಾರ್ಯರು, ಶ್ರೀ ಮಧ್ವಾಚಾರ್ಯರು ಇವರೇ ಮೊದಲಾದವರನ್ನೂ ಜ್ಞಾಪಿಸಿಕೊಂಡೆ. ಅನಂತರ ನಾನು ಮೊಟ್ಟಮೊದಲು ಓದಿದ ಶ್ರೀ ಶಂಕರಾಚಾರ್ಯರ ಕೃತಿ ವಿವೇಕಚೂಡಾಮಣಿಯ ಬಹಳ ಮುಖ್ಯವಾದ ಹತ್ತು ಶ್ಲೋಕಗಳು (೨೫೪-೨೬೩) ಜ್ಞಾಪಕಕ್ಕೆ ಬಂದುವು :

ಜಾತಿನೀತಿಕುಲಗೋತ್ರದೂರಗಂ
  ನಾಮರೂಪಗುಣದೋಷವರ್ಜಿತಮ್ ।
ದೇಶಕಾಲ ವಿಷಯಾತಿವರ್ತಿ ಯ-
  ದ್ಬ್ರಹ್ಮ ತತ್ತ್ವಮಸಿ ಭಾವಯಾತ್ಮನಿ ॥೧॥

ಯತ್ಪರಂ ಸಕಲವಾಗಗೋಚರಂ
ಗೋಚರಂ ವಿಮಲಬೋಧಚಕ್ಷುಷಃ ।
ಶುದ್ಧಚಿದ್ಘನಮನಾದಿ ವಸ್ತು ಯ-
ದ್ಬ್ರಹ್ಮ ತತ್ತ್ವಮಸಿ ಭಾವಯಾತ್ಮನಿ ॥೨॥

ಷಡ್ಭಿರೂರ್ಮಿಭಿರಯೋಗಿ ಯೋಗಿಹೃ-
ದ್ಭಾವಿತಂ ನ ಕರಣೈರ್ವಿಭಾವಿತಮ್ ।
ಬುಧ್ಯವೇದ್ಯಮನವದ್ಯಮಸ್ತಿ ಯ-
ದ್ಬ್ರಹ್ಮ ತತ್ತ್ವಮಸಿ ಭಾವಯಾತ್ಮನಿ ॥೩॥

ಭ್ರಾಂತಿಕಲ್ಪಿತಜಗತ್ಕಲಾಶ್ರಯಂ
ಸ್ವಾಶ್ರಯಂ ಚ ಸದಸದ್ವಿಲಕ್ಷಣಮ್ ।
ನಿಷ್ಕಲಂ ನಿರುಪಮಾನವದ್ಧಿ ಯ-
ದ್ಬ್ರಹ್ಮ ತತ್ತ್ವಮಸಿ ಭಾವಯಾತ್ಮನಿ ॥೪॥

ಜನ್ಮವೃದ್ಧಿಪರಿಣತ್ಯಪಕ್ಷಯ-
ವ್ಯಾಧಿನಾಶನವಿಹೀನಮವ್ಯಯಮ್ ।
ವಿಶ್ವಸೃಷ್ಟ್ಯವವಿಘಾತಕಾರಣಂ
ಬ್ರಹ್ಮ ತತ್ತ್ವಮಸಿ ಭಾವಯಾತ್ಮನಿ ॥೫॥

ಅಸ್ತಭೇದಮನಪಾಸ್ತಲಕ್ಷಣಂ
ನಿಸ್ತರಂಗಜಲರಾಶಿನಿಶ್ಚಲಮ್ ।
ನಿತ್ಯಮುಕ್ತಮವಿಭಕ್ತಮೂರ್ತಿ ಯ-
ದ್ಬ್ರಹ್ಮ ತತ್ತ್ವಮಸಿ ಭಾವಯಾತ್ಮನಿ ॥೬॥

ಏಕಮೇವ ಸದನೇಕಕಾರಣಂ
ಕಾರಣಾಂತರನಿರಾಸ್ಯಕಾರಣಮ್ ।
ಕಾರ್ಯಕಾರಣವಿಲಕ್ಷಣಂ ಸ್ವಯಂ
ಬ್ರಹ್ಮ ತತ್ತ್ವಮಸಿ ಭಾವಯಾತ್ಮನಿ ॥೭॥

ನಿರ್ವಿಕಲ್ಪಕಮನಲ್ಪಮಕ್ಷರಂ
ಯತ್ ಕ್ಷರಾಕ್ಷರವಿಲಕ್ಷಣಂ ಪರಮ್ ।
ನಿತ್ಯಮವ್ಯಯಸುಖಂ ನಿರಂಜನಂ
ಬ್ರಹ್ಮ ತತ್ತ್ವಮಸಿ ಭಾವಯಾತ್ಮನಿ ॥೮॥

ಯದ್ವಿಭಾತಿ ಸದನೇಕಧಾ ಭ್ರಮಾ-
ನ್ನಾಮರೂಪಗುಣವಿಕ್ರಿಯಾತ್ಮನಾ ।
ಹೇಮವತ್ಸ್ವಯಮವಿಕ್ರಿಯಂ ಸದಾ
ಬ್ರಹ್ಮ ತತ್ತ್ವಮಸಿ ಭಾವಯಾತ್ಮನಿ ॥೯॥

ಯಚ್ಚಕಾಸ್ತ್ಯನಪರಂ ಪರಾತ್ಪರಂ
ಪ್ರತ್ಯಗೇಕರಸಮಾತ್ಮಲಕ್ಷಣಮ್ ।
ಸತ್ಯಚಿತ್ಸುಖಮನಂತಮವ್ಯಯಂ
ಬ್ರಹ್ಮ ತತ್ತ್ವಮಸಿ ಭಾವಯಾತ್ಮನಿ ॥೧೦॥

೧. ಜಾತಿ ನೀತಿ ಕುಲ ಗೋತ್ರ ಇವುಗಳಿಗೆ ಅತೀತನಾದ, ನಾಮ ರೂಪ ದೋಷ ಗುಣ ಇವು ಯಾವೂ ಇಲ್ಲದ, ದೇಶ ಕಾಲ ವಿಷಯ ಇವುಗಳಿಗೆ ನಿಲುಕದ ಆ ಪರಬ್ರಹ್ಮನೇ ನೀನು. ಆತನ ಮೇಲೆ ನೀನು ನಿನ್ನ ಅಂತರ್ಯದಲ್ಲಿ ಧ್ಯಾನಮಾಡು.

೨. ಯಾರು ಪರಮ ವರಿಷ್ಠನೊ, ಯಾರು ಸಕಲ ವಾಕ್ಕುಗಳಿಗೂ ಅಗೋಚರನೊ, ಯಾರು ವಿಮಲಬೋಧಚಕ್ಷುಗಳಿಗೆ ಮಾತ್ರ ಗೋಚರನೊ, ಯಾರು ಶುದ್ಧಚಿದ್ಘನಮನಾದಿವಸ್ತುವೊ ಆ ಪರಬ್ರಹ್ಮನೇ ನೀನು. ಆತನ ಮೇಲೆ ನೀನು ನಿನ್ನ ಅಂತರ್ಯದಲ್ಲಿ ಧ್ಯಾನಮಾಡು.

೩. ಯಾರು ಆರು ವಿಧದ ತರಂಗಗಳಿಂದ[1] ಸ್ಪರ್ಶನಾಗಿಲ್ಲವೊ, ಯಾರನ್ನು ಯೋಗಿಗಳು ತಮ್ಮ ಹೃದಯದಲ್ಲಿ ಧ್ಯಾನಮಾಡುತ್ತಾರೊ, ಯಾರನ್ನು ಇಂದ್ರಿಯಗಳು ಗ್ರಹಿಸಲಾರವೊ, ಯಾರನ್ನು ಬುದ್ಧಿ ಅರಿಯಲಾರದೊ, ಯಾರು ನಿರಾಕ್ಷೇಪಣೀಯನೊ ಆ ಪರಬ್ರಹ್ಮನೇ ನೀನು. ಆತನ ಮೇಲೆ ನೀನು ನಿನ್ನ ಅಂತರ್ಯದಲ್ಲಿ ಧ್ಯಾನಮಾಡು.

1. ಕ್ಷಯಿಸುವಿಕೆ ಸಾಯುವಿಕೆ, ಹಸಿವು ಬಾಯಾರಿಕೆ, ದುಃಖ ಮೋಹ.

೪. ಭ್ರಾಂತಿಕಲ್ಪಿತ ಈ ವೈಚಿತ್ರ್ಯ ಜಗತ್ತಿಗೆ ಆಶ್ರಯನಾದ, ತನಗೆ ತಾನೇ ಆಶ್ರಯನಾದ, ಸದಸದ್ವಿಲಕ್ಷಣನಾದ, ನಿಷ್ಕಲನಾದ, ನಿರುಪಮನಾದ, ಆ ಪರಬ್ರಹ್ಮನೇ ನೀನು. ಆತನ ಮೇಲೆ ನೀನು ನಿನ್ನ ಅಂತರ್ಯದಲ್ಲಿ ಧ್ಯಾನಮಾಡು.

೫. ಯಾರು ಜನ್ಮ, ವೃದ್ಧಿ, ಪರಿಣತಿ, ಅಪಕ್ಷಯ, ವ್ಯಾಧಿ, ನಾಶನ ಇವುಗಳಿಂದ ಮುಕ್ತನೊ, ಯಾರು ಅವ್ಯಯನೊ, ಯಾರು ಈ ವಿಶ್ವದ ಸೃಷ್ಟಿ ಸ್ಥಿತಿ ಪ್ರಳಯ ಕಾರಣನೊ ಆ ಪರಬ್ರಹ್ಮನೇ ನೀನು. ಆತನ ಮೇಲೆ ನೀನು ನಿನ್ನ ಅಂತರ್ಯದಲ್ಲಿ ಧ್ಯಾನಮಾಡು.

೬. ಅಭೇದನಾದ, ಅನಪಾಸ್ತಲಕ್ಷಣನಾದ, ನಿಸ್ತರಂಗಜಲರಾಶಿಯಂತೆ ನಿಶ್ಚಲನಾದ, ನಿತ್ಯಮುಕ್ತನಾದ, ಅವಿಭಕ್ತಮೂರ್ತಿಯಾದ ಆ ಪರಬ್ರಹ್ಮನೇ ನೀನು. ಆತನ ಮೇಲೆ ನೀನು ನಿನ್ನ ಅಂತರ್ಯದಲ್ಲಿ ಧ್ಯಾನಮಾಡು.

೭. ಇರತಕ್ಕವನು ತಾನೊಬ್ಬನೇ ಆದರೂ ತಾನೇ ಅನೇಕಕ್ಕೆ ಕಾರಣನಾಗಿರುವ, (ಈ ಜಗತ್ತಿನ ಮೂಲಕ್ಕೆ) ಉಳಿದ ಎಲ್ಲಾ ಕಾರಣಗಳನ್ನು ಖಂಡಿಸುವವನಾದರೂ ತಾನು ಮಾತ್ರ ಕಾರಣರಹಿತನಾಗಿರುವ, ಕಾರ್ಯಕಾರಣವಿಲಕ್ಷಣನಾಗಿರುವ, ಸ್ವತಂತ್ರನಾಗಿರುವ ಆ ಪರಬ್ರಹ್ಮನೇ ನೀನು. ಆತನ ಮೇಲೆ ನೀನು ನಿನ್ನ ಅಂತರ್ಯದಲ್ಲಿ ಧ್ಯಾನಮಾಡು.

೮. ನಿರ್ವಿಕಲ್ಪಕನಾದ, ಅನಲ್ಪನಾದ, ಅಕ್ಷರನಾದ, ಕ್ಷರಾಕ್ಷರ ವಿಲಕ್ಷಣನಾದ, ಪರಮಶ್ರೇಷ್ಠನಾದ, ನಿತ್ಯನಾದ, ಅವ್ಯಯಸುಖಪೂರಿತನಾದ, ನಿರಂಜನನಾದ ಆ ಪರಬ್ರಹ್ಮನೇ ನೀನು. ಆತನ ಮೇಲೆ ನೀನು ನಿನ್ನ ಅಂತರ್ಯದಲ್ಲಿ ಧ್ಯಾನಮಾಡು.

೯. ನಿಜವಾಗಿ ಇರತಕ್ಕವನು ತಾನೊಬ್ಬನೇ ಆದರೂ (ಜೀವರ) ಭ್ರಮೆಯಿಂದ ಅನೇಕವಾಗಿರುವ ಹಾಗೆ ತೋರ್ಪಡಿಸಿಕೊಳ್ಳುತ್ತಿರುವ, ನಾಮರೂಪ ಗುಣ ವಿಕ್ರಿಯೆ ಇವನ್ನು ಹೊಂದುತ್ತಿದ್ದರೂ ಚಿನ್ನ ಮತ್ತು ಅದರ ಆಭರಣಗಳ ಹಾಗೆ ಸದಾ ಅವಿಕ್ರಿಯನಾಗಿರುವ ಆ ಪರಬ್ರಹ್ಮನೇ ನೀನು. ಆತನ ಮೇಲೆ ನೀನು ನಿನ್ನ ಅಂತರ್ಯದಲ್ಲಿ ಧ್ಯಾನಮಾಡು.

೧೦. ಯಾರಿಗಿಂತ ಅತೀತವಾದ್ದು ಬೇರೊಂದು ಇಲ್ಲವೊ, ಯಾರು ಪರಾತ್ಪರನೊ, ಯಾರು ಪ್ರತಿಯೊಂದರ ಅಂತರ್ಯಾಮಿಯೊ, ಯಾರು ಪ್ರತಿಯೊಂದರ ನಿಜವಾದ ಆತ್ಮನೊ, ಯಾರು ಸತ್ಯಚಿತ್ಸುಖಮನಂತನೊ

ಯಾರು ಅವ್ಯಯನೊ ಆ ಪರಬ್ರಹ್ಮನೇ ನೀನು. ಆತನ ಮೇಲೆ ನೀನು ನಿನ್ನ ಅಂತರ್ಯದಲ್ಲಿ ಧ್ಯಾನಮಾಡು.

ಬಳಿಕ ಭಾರತದ ಆದರ್ಶಪುರುಷನ ಸಂಬಂಧವಾಗಿ ಶ್ರೀ ಶಂಕರಾಚಾರ್ಯರು ರಚಿಸಿರುವ ಕೌಪೀನಪಂಚಕವೂ ಜ್ಞಾಪಕಕ್ಕೆ ಬಂತು.

**ಕೌಪೀನಪಂಚಕಮ್ :**

ವೇದಾಂತ ವಾಕ್ಯೇಷು ಸದಾ ರಮಂತೋ
ಭಿಕ್ಷಾನ್ನಮಾತ್ರೇಣ ಚ ತುಷ್ಟಿಮಂತಃ ।
ವಿಶೋಕಮಂತಃಕರಣೇ ಚರಂತಃ
ಕೌಪೀನವಂತಃ ಖಲು ಭಾಗ್ಯವಂತಃ ॥೧॥

ಮೂಲಂ ತರೋಃ ಕೇವಲಮಾಶ್ರಯಂತಃ
ಪಾಣಿದ್ವಯಂ ಭೋಕ್ತುಮಮಂತ್ರಯಂತಃ ।
ಕಂಥಾಮಿವ ಶ್ರೀಮಪಿ ಕುತ್ಸಯಂತಃ
ಕೌಪೀನವಂತಃ ಖಲು ಭಾಗ್ಯವಂತಃ ॥೨॥

ಸ್ವಾನಂದಭಾವೇ ಪರಿತುಷ್ಟಿಮಂತಃ
ಸುಶಾಂತಸರ್ವೇಂದ್ರಿಯವೃತ್ತಿಮಂತಃ ।
ಅಹರ್ನಿಶಂ ಬ್ರಹ್ಮಸುಖೇ ರಮಂತಃ
ಕೌಪೀನವಂತಃ ಖಲು ಭಾಗ್ಯವಂತಃ ॥೩॥

ದೇಹಾದಿಭಾವಂ ಪರಿವರ್ತಯಂತಃ
ಸ್ವಾತ್ಮಾನಮಾತ್ಮನ್ಯವಲೋಕಯಂತಃ ।
ನಾಂತಂ ನ ಮಧ್ಯಂ ನ ಬಹಿಃ ಸ್ಮರಂತಃ
ಕೌಪೀನವಂತಃ ಖಲು ಭಾಗ್ಯವಂತಃ ॥೪॥

ಬ್ರಹ್ಮಾಕ್ಷರಂ ಪಾವನಮುಚ್ಚರಂತೋ
ಬ್ರಹ್ಮಾಹಮಸ್ಮೀತಿ ವಿಭಾವಯಂತಃ ।
ಭಿಕ್ಷಾಶಿನೋ ದಿಕ್ಷು ಪರಿಭ್ರಮಂತಃ
ಕೌಪೀನವಂತಃ ಖಲು ಭಾಗ್ಯವಂತಃ ॥೫॥

೧. ವೇದಾಂತ ವಾಕ್ಯಗಳಲ್ಲಿ ಸದಾ ನಿರತನಾಗಿರುವ, ಕೇವಲ ಭಿಕ್ಷಾನ್ನ ಮಾತ್ರದಿಂದಲೇ ತುಷ್ಟನಾಗಿರುವ, ಶೋಕವಿಹೀನನಾಗಿರುವ ಅಂತರ್ಯದಲ್ಲೇ ವಿಹರಿಸುತ್ತಿರುವ ಕೌಪೀನವಂತನೇ ನಿಸ್ಸಂದೇಹವಾಗಿ ಭಾಗ್ಯವಂತ.

೨. ಕೇವಲ ತರುಗಳ ಮೂಲವನ್ನೇ ಆಶ್ರಯಿಸಿಕೊಂಡಿರುವ, ತನ್ನ ಎರಡು ಕರಗಳನ್ನೇ ಭಿಕ್ಷಾಪಾತ್ರೆಯನ್ನಾಗಿ ಮಾಡಿಕೊಂಡಿರುವ, ಶ್ರೀಯನ್ನು ಕೂಡ ಒಂದು ಹಳೇ ಚಿಂದಿಯೋಪಾದಿಯಲ್ಲಿ ಧಿಕ್ಕರಿಸಿರುವ ಕೌಪೀನ ವಂತನೇ ನಿಸ್ಸಂದೇಹವಾಗಿ ಭಾಗ್ಯವಂತ.

೩. ಸ್ವಾನಂದಭಾವದಿಂದಲೇ ಪರಿತುಷ್ಟನಾಗಿರುವ, ತನ್ನ ಎಲ್ಲಾ ಇಂದ್ರಿಯಗಳನ್ನು ಸುಶಾಂತವಾದುವುಗಳನ್ನಾಗಿ ಮಾಡಿಕೊಂಡಿರುವ, ಅಹರ್ನಿಶಿ ಬ್ರಹ್ಮ ಸುಖದಲ್ಲೇ ವಿಹರಿಸುತ್ತಿರುವ ಕೌಪೀನವಂತನೇ ನಿಸ್ಸಂ ದೇಹವಾಗಿ ಭಾಗ್ಯವಂತ.

೪. ದೇಹಾದಿಗಳಲ್ಲಿ ಆತ್ಮಬುದ್ಧಿಯನ್ನು ತ್ಯಜಿಸಿರುವ, ತನ್ನ ಸ್ವರೂಪವನ್ನೇ ತನ್ನ ಅಂತಃಕರಣದಲ್ಲಿ ದರ್ಶಿಸುತ್ತಿರುವ, ಒಳಗೂ ಹೊರಗೂ ಮಧ್ಯೇ ಎಂಬ ಭೇದಭಾವನೆಯೇ ಇಲ್ಲದಿರುವ ಕೌಪೀನವಂತನೇ ನಿಸ್ಸಂ ದೇಹವಾಗಿ ಭಾಗ್ಯವಂತ.

೫. ಪವಿತ್ರವೂ ಬ್ರಹ್ಮಸೂಚಕವೂ ಆದ ಪ್ರಣವಾಕ್ಷರವನ್ನು ಉಚ್ಚರಿಸುತ್ತಿರುವ, "ನಾನೇ ಬ್ರಹ್ಮ" ಎಂಬುದಾಗಿ ಭಾವಿಸುತ್ತಿರುವ, ಭಿಕ್ಷಾನ್ನ ಭೋಜಿಯಾಗಿರುವ, ದಿಗ್ದಿಗಂತಗಳಲ್ಲೆಲ್ಲಾ ಪರಿಭ್ರಮಿಸುತ್ತಿರುವ ಕೌಪೀನವಂತನೇ ನಿಸ್ಸಂದೇಹವಾಗಿ ಭಾಗ್ಯವಂತ.

ಆದಷ್ಟು ಬೇಗ ಈ ರೀತಿಯ ಆದರ್ಶಪುರುಷನನ್ನಾಗಿ ನನ್ನನ್ನೂ ಮಾಡುವಂತೆ ಕೈಲಾಸಪತಿಯನ್ನು ಪ್ರಾರ್ಥಿಸಿ ಆತನಿಗೆ ಸಾಷ್ಟಾಂಗಪ್ರಣಾಮ ಮಾಡಿದೆ. "ಇಂದು ಈ ಸ್ಥಳವನ್ನು ಬಿಟ್ಟು ಹೊರಡಬೇಕಲ್ಲ" ಎಂಬ ದುಃಖದಿಂದ ಅಲ್ಲಿಂದ ಎದ್ದು ಕೊಠಡಿಗೆ ಹಿಂದಿರುಗಿ ಹೊರಡಲನುವಾದೆ. ಮಗಳು ತೌರುಮನೆಯನ್ನು ಬಿಟ್ಟು ಪತಿಯ ಮನೆಗೆ ಹೊರಡಲನುವಾಗ ಬೇಕಾದರೆ ಆಕೆಗೆ ಎಷ್ಟು ದುಃಖವಾಗುವುದೊ ಬಹುಶಃ ಅಷ್ಟೇ ದುಃಖ ನನಗೂ ಆಗಿರಬೇಕು. ಆದರೂ ಇಂದಿನ ಪ್ರಯಾಣಕ್ಕೆ ಸಿದ್ಧನಾಗಿ ಗೊಂಫ ದಿಂದ ಹೊರಕ್ಕೆ ಕಾಲು ಹಾಕೇಬಿಟ್ಟೆ. ಇಷ್ಟು ಸುಂದರ ಮೂರ್ತಿ ಕೈಲಾಸ

ಪತಿಯನ್ನು ಬಿಟ್ಟು ಮುಂದಕ್ಕೆ ಹೋಗಬೇಕಲ್ಲ ಎಂಬ ದುಃಖ ಸುಮ್ಮನೆ ಹೃದಯವನ್ನು ಮೀಟುತ್ತಲೇ ಇತ್ತು.

ಗೊಂಫದಿಂದ ಸ್ವಲ್ಪ ದೂರ ಕೆಳಕ್ಕೆ ಇಳಿದುಬಂದು ಎಲ್ಲರೂ ಕೈಲಾಸ ಪತಿಗೆ ಸಾಷ್ಟಾಂಗಪ್ರಣಾಮ ಮಾಡಿದೆವು. ಆಗ ನೋಡುತ್ತೇವೆ, ಪ್ರಾತಃ ಕಾಲದ ಹೊಂಬಣ್ಣದ ಸೂರ್ಯನ ಕಿರಣಗಳು ಕೈಲಾಸಪತಿಯ ಮೇಲೆ ಬಿದ್ದು ಆತನ ವಿಶೇಷರೂಪಿಗೆ ಇನ್ನೂ ಅಧಿಕ ಸೌಂದರ್ಯವನ್ನು ಕೊಟ್ಟವೆ. ಕೈಲಾಸಪತಿ ಸುಮ್ಮನೆ ಪ್ರಜ್ವಲಿಸುತ್ತಿದಾನೆ. ಮತ್ತೊಮ್ಮೆ ಸಾಷ್ಟಾಂಗ ಪ್ರಣಾಮ ಮಾಡಿ ಈಗಲೂ ಸಕಲ ಜೀವರಾಶಿಗಳ ಹಿತಚಿಂತನೆಗಾಗಿ ಪ್ರಾರ್ಥಿಸಿ ದುಃಖಪೂರಿತ ಹೃದಯದಿಂದ ಆಗಾಗ ಕೈಲಾಸಪತಿಯ ಕಡೆ ತಿರುಗಿ ತಿರುಗಿ ನೋಡುತ್ತಲೇ ನದಿಯನ್ನು ದಾಟಿ ಆಚೆ ದಡಕ್ಕೆ ಬಂದೆವು.

ಇಂದಿನ ದಾರಿಯಲ್ಲಿ ನಾವು ೧೮,೬೦೦ ಅಡಿ ಎತ್ತರವಿರುವ ಡಾಲ್‌ಮಲಾ ಕಣಿವೆಯನ್ನು ದಾಟಬೇಕಾಗಿತ್ತು. ಅದನ್ನು ದಾಟುವುದ ರಲ್ಲೇ ನಮ್ಮ ದೈಹಿಕ ಮತ್ತು ಮಾನಸಿಕ ಶಕ್ತಿಗಳ ಕಟ್ಟಕಡೆಯ ಪರೀಕ್ಷೆ ನಡೆದುಹೋಗಿಬಿಡುತ್ತದೆ. ಲಿಪುಲೇಖ್ ಕಣಿವೆಯ ಎತ್ತರ ೧೬,೭೫೦ ಅಡಿ. ಇದು ೧೮,೬೦೦ ಅಡಿ. ಎಂದರೆ, ಇಂದು ಅಂದಿಗಿಂತ ೧,೮೫೦ ಅಡಿ ಹೆಚ್ಚು ಎತ್ತರಕ್ಕೆ ಹತ್ತಬೇಕಾಗಿತ್ತು. ಆದರೆ ನಮ್ಮ ಗೈಡು ತಿಳಿಸಿದ್ದ: " ಲಿಪುಲೇ ಖಿನ ಹತ್ತಿರ ಮೈಲಿಗಳಾದ ಮೇಲೆ ಮೈಲಿಗಳನ್ನು ಹಿಮದ ಮೇಲೆ ನಡೆದ ಹಾಗೆ ಇಲ್ಲಿ ನಡೆಯಬೇಕಾಗಿರುವುದಿಲ್ಲ. ಎಲ್ಲೊ ಸ್ವಲ್ಪ ದೂರ ಮಾತ್ರ ಹಿಮದ ಮೇಲೆ ನಡೆಯಬೇಕಾಗಿ ಬರುತ್ತದೆ. ಆದರೆ ಒಂದು ತೊಂದರೆ ಇದೆ. ಒಮ್ಮೊಮ್ಮೆ ಯಾತ್ರಿಕರು ಈ ಕಣಿವೆಯ ತುದಿಗೆ ಬರುವುದರೊಳ ಗಾಗೇ ಹಿಮ ಬೀಳಲು ಪ್ರಾರಂಭಿಸಿಬಿಡುತ್ತದೆ. ಆಗ ಅಲ್ಲಿ ಚಳಿ ವಿಪರೀತ ವಾಗಿ ಯಾತ್ರಿಕರು ಬಹಳ ಕಷ್ಟಕ್ಕೆ ಒಳಗಾಗಬೇಕಾಗಿ ಬರುತ್ತದೆ" ಎಂಬುದಾಗಿ. ಆದರೆ ಭಗವಂತನ ಕೃಪೆಯಿಂದ ನಾವು ಆ ಕಷ್ಟಕ್ಕೆ ಒಳ ಗಾಗಲಿಲ್ಲ. ಆಕಾಶ ಬಹಳ ಸ್ವಚ್ಛವಾಗೇ ಇತ್ತು.

ನಾವು ದಿರಾಫು ಗೊಂಫದಿಂದಿಳಿದು ನದಿಯನ್ನು ದಾಟಿದನಂತರ ಅದರ ಎಡ ದಡದಲ್ಲೇ ಸ್ವಲ್ಪ ದೂರ ಮುಂದುವರಿದು ಕೊನೆಗೆ ಬಲಕ್ಕೆ ತಿರುಗಿ ಒಂದು ಕಡಿದಾದ ಬೆಟ್ಟವನ್ನು ಹತ್ತಲಾರಂಭಿಸಿದೆವು. ಡಾಲ್‌ಮಲಾ ಕಣಿವೆ ಸಿಕ್ಕುವವರೆಗೆ ಸುಮಾರು ಐದು ಮೈಲಿ ದೂರ ಒಂದೇ

ಸಮನೆ ಹತ್ತಿ ಹತ್ತಿ ಹೋಗಬೇಕಾಯಿತು. ಆಗಾಗ ಕೈಲಾಸಪತಿ ಕಾಣಿಸಿಕೊಳ್ಳುತ್ತಿದ್ದ. ಒಂದು ಜಾಗದಲ್ಲಿ ಆತ ಆ ರೀತಿಯಾಗಿ ಕಾಣಿಸಿಕೊಂಡ ಆತನ ಶ್ವೇತ ವರ್ಣದ ತಲೆಗೂದಲು ಬಹಳ ಕೆಳಗಿನವರೆಗೂ ಜೋಲು ಬಿದ್ದಿರುವುದೊ ಏನೊ ಎಂಬಂತೆ. ಎಂದರೆ ಹಿಮಪ್ರವಾಹ ಕೈಲಾಸಶಿಖರದಿಂದ ಉದ್ಭವವಾಗಿ ಒಂದೇ ಸಮನೆ ಕೆಳಕ್ಕೆ ಇಳಿದು ಗೌರೀಕುಂಡದ ಕಡೆ ಹರಿಯುತ್ತಿರುವುದು ನಮ್ಮ ಕಣ್ಣಿಗೆ ಬಿತ್ತು.

ಇಂದು ಸ್ವಲ್ಪ ದೂರ ನಡೆದರೇನೇ ಬಹಳವಾಗಿ ಸಾಕಾಗಿಬಿಡುತ್ತಿತ್ತು. ನಮಗೆ ಸಾಕಾದಷ್ಟು ಆಮ್ಲಜನಕ ದೊರೆಯದೆ ದೀರ್ಘ ಉಚ್ಛ್ವಾಸ ನಿಶ್ವಾಸ ಬಿಡಬೇಕಾಗಿ ಬಂತು. ಒಮ್ಮೊಮ್ಮೆ ಅನಿಸುತ್ತಿತ್ತು : "ಹೃದಯ ನಿಂತುಹೋಗಿಬಿಡುವುದೊ ಏನೊ" ಎಂಬುದಾಗಿ. ಆದರೆ ಭಗವಂತನ ಕೃಪೆಯಿಂದ ಯಾರಿಗೂ ಯಾವ ತೊಂದರೆಯೂ ಆಗಲಿಲ್ಲ. ಹಾಗೆ ತೋರಿದಾಗಲೆಲ್ಲ ಸ್ವಲ್ಪ ಹೊತ್ತು ವಿಶ್ರಮಿಸಿಕೊಂಡು ಮುಂದುವರಿದು ಡಾಲ್‌ಮಲಾ ಕಣಿವೆಯ ಹತ್ತಿರಕ್ಕೆ ಬಂದೆವು. ಈಗ ಎಲ್ಲೊ ಸ್ವಲ್ಪವೇ ದೂರ ಹಿಮದ ಮೇಲೆ ನಡೆಯಬೇಕಾಗಿ ಬಂತು. ಇಲ್ಲಿ ನಾವು ನಿಜವಾದ ಹಿಮಪ್ರವಾಹ ಏನು ಎಂಬುದನ್ನು ನೋಡಬಹುದಾಗಿತ್ತು. ಚಳಿ ಇಲ್ಲಿ ವಿಪರೀತ. ಸುಮ್ಮನೆ ಕೊರೆಯಲಾರಂಭಿಸಿತು.

ನಾವು ಕೈಲಾಸಪರ್ವತದ ಪಶ್ಚಿಮ ಭಾಗದಲ್ಲಿ ನಡೆಯುತ್ತಿದ್ದಾಗ ಅಲ್ಲಿನ ಕಲ್ಲು, ಬೆಟ್ಟ, ಎಲ್ಲ ಕೆಂಪು ಸುಣ್ಣ ಕಲ್ಲಿನ ಕಾಂಕ್ರೀಟನಿಂದ ನಿರ್ಮಿತವಾದಂತೆ ಕಂಡುವು. ಇಲ್ಲಿ ನೋಡುತ್ತೇವೆ, ಒಂದು ತರದ ಕರಿ ಕಲ್ಲುಗಳ ಬಂಡೆಗಳು ಹೇರಳವಾಗಿ ಬಿದ್ದಿವೆ. ಅವುಗಳ ಮೂಲಕ ಹಿಮಪ್ರವಾಹ ಹರಿದುಬರುತ್ತಿದೆ. ಹಾಗೇ ಮುಂದುವರಿದು ಡಾಲ್‌ಮಲಾ ಕಣಿವೆಯ ತುದಿಯನ್ನು ಹತ್ತಿಯೇ ಬಿಟ್ಟೆವು. ಆಗ ಸಮಯ ಹತ್ತೂವರೆ. ಇಂದಿನ ಪರೀಕ್ಷೆಯಲ್ಲಿ ತೇರ್ಗಡೆ ಆಗಿಯೇ ಬಿಟ್ಟೆವು. ನಮ್ಮೆಲ್ಲರಿಗೂ ಹಿಡಿಸಲಾರದ ಆನಂದ ಆಗಿಬಿಟ್ಟಿತು. ಆಗ ನಮ್ಮ ಗೈಡು ಹೇಳಿದ : "ಸ್ವಾಮಿಜಿ, ಇನ್ನೂ ಒಂದು ಪರೀಕ್ಷೆ ಉಳಿದುಕೊಂಡಿದೆ. ಇಲ್ಲಿಂದ ಒಂದು ಇನ್ನೂರು ಅಡಿ ಇಳಿಯುವುದರೊಳಗೇ ಗೌರೀಕುಂಡ ಸಿಕ್ಕುತ್ತದೆ. ಅದರಲ್ಲಿ ಸ್ನಾನ ಮಾಡಬೇಕು. ಆಗ ನಿಮ್ಮ ದೈಹಿಕ ಮತ್ತು ಮಾನಸಿಕ ಶಕ್ತಿಯ ಕೊನೆಯ ಪರೀಕ್ಷೆ ನಡೆದುಹೋಗಿಬಿಡುತ್ತದೆ." ನಾನು ಆತನಿಗೆ ಹೇಳಿದೆ; "ಭಗವಂತನ ಕೃಪೆ ಮಾತ್ರ ಇದ್ದರೆ ಏನು ತಾನೆ ಸಾಧ್ಯವಿಲ್ಲ.?"

ಡಾಲ್ಮಾಲಾ ಕಣಿವೆಯ ತುದಿಯಲ್ಲಿದ್ದ ಬಂಡೆಗಳ ಮೇಲೆ ಎಲ್ಲರೂ ಸ್ವಲ್ಪ ಹೊತ್ತು ಕುಳಿತು ವಿಶ್ರಾಂತಿ ಪಡೆದೆವು. ಬಳಿಕ ನಮ್ಮ ಪಾರ್ಟಿಯವರು ಮುಂದಕ್ಕೆ ಹೊರಡಲು ಎದ್ದು ನಿಂತರು. ನನಗೇನೊ ಅಲ್ಲೇ ಸ್ವಲ್ಪ ಹೊತ್ತು ಏಕಾಂತದಲ್ಲಿ ಕುಳಿತಿರಬೇಕು ಅಂತ ಅನಿಸಿತು. ಅದಕ್ಕಾಗಿ ನಾನು ಅವರಿಗೆ ಹೇಳಿದೆ: "ದಯವಿಟ್ಟು ನೀವು ಮುಂದುವರಿಯುತ್ತಿರಿ. ನಾನು ನಿಮ್ಮ ಹಿಂದೆಯೇ ಬಂದುಬಿಡುತ್ತೇನೆ." ಆದರೆ ಅಲ್ಲಿ ಸುತ್ತಲೂ ಕಂಡುಬಂದ ಆ ಮನೋಹರ ದೃಶ್ಯ, ಆ ಪ್ರಶಾಂತ ವಾತಾವರಣ ಇವು ಮನಸ್ಸಿಗೆ ಬಹಳ ಆನಂದವನ್ನು ಉಂಟುಮಾಡಿ ಇನ್ನೇನು ಹೊರಡೋಣ ಹೊರಡೋಣ ಅನ್ನುವುದರಲ್ಲೇ ಘಂಟೆ ಹನ್ನೊಂದೂಕಾಲು ಆಗಿಯೇ ಹೋಯಿತು. "ಅಯ್ಯೋ! ಇಲ್ಲಿ ಇಷ್ಟು ಹೊತ್ತು ಕುಳಿತುಬಿಟ್ಟೆನಲ್ಲ. ನಮ್ಮ ಪಾರ್ಟಿಯವರು ಗೌರೀಕುಂಡದ ಹತ್ತಿರ ನನಗಾಗಿ ಕಾದಿರಬಹುದು" ಎಂದು ಯೋಚಿಸಿ ಒಡನೇ ಹೊರಟೆ. ಆದರೆ ನಾನು ಗೌರೀಕುಂಡ ತಲುಪುವುದರಲ್ಲಿ ನಮ್ಮ ಪಾರ್ಟಿಯವರು ನನಗಾಗಿ ಕಾದು ಸಾಕಾಗಿ ತಮ್ಮ ಪೂಜೆ ಪುರಸ್ಕಾರಗಳನ್ನು ಮುಗಿಯಿಸಿಕೊಂಡು ಆಗಲೆ ಮುಂದುವರಿದುಬಿಟ್ಟಿದ್ದರು.

ಗೌರೀಕುಂಡವನ್ನು ತಲುಪಿ ನೋಡುತ್ತೇನೆ, ಅದು ಒಂದು ವಿಶಾಲವಾದ ನೀರ್ಗಲ್ಲಿನ ಕುಂಡದಂತಿದೆ! ಅದರ ವ್ಯಾಸ ಒಂದು ಫರ್ಲಾಂಗಿನಷ್ಟಾದರೂ ಇರಬೇಕು. ಅದರ ಪಶ್ಚಿಮ ಭಾಗದಿಂದ ಹಿಮ ಪ್ರವಾಹ ಅದಕ್ಕೆ ಧುಮುಕುತ್ತಿದೆ. ಅದರ ಸುತ್ತಲೂ ನಾವು ಕಟ್ಟಡಕ್ಕೆ ಉಪಯೋಗಿಸುವಂಥ ಕಲ್ಲು ಬಂಡೆಗಳನ್ನ ನಿಜವಾಗಿ ಉಳಿಗಳಿಂದ ಒಡೆದು ರಾಶಿಹಾಕಿರುವಂತೆ ಕಂಡಿತು. ಅವುಗಳ ಮೇಲೆ ಕಾಲು ಹಾಕಿದರೆ ಎಲ್ಲಿ ಅವು ಉರುಳಿಕೊಂಡು ನಮ್ಮನ್ನು ಕುಂಡಕ್ಕೆ ಬೀಳಿಸಿಬಿಡುವುವೊ ಎಂಬಂತೆ ನೆಪಮಾತ್ರಕ್ಕೆ ಒಂದರ ಮೇಲೊಂದು ಕುಳಿತಿದ್ದುವು. ನೀರು ಎಂಬುದು ಎಲ್ಲೂ ಕಣ್ಣಿಗೆ ಬೀಳಲೇ ಇಲ್ಲ. ಯೋಚನೆ ಬಂತು: "ಇಲ್ಲಿ ಸ್ನಾನ ಮಾಡುವ ಬಗೆ ಹೇಗೆ?" ಹಾಗೇ ಸ್ವಲ್ಪ ಹೊತ್ತು ಸುತ್ತಾಡಿ ನೋಡುವುದರಲ್ಲಿ ನಮ್ಮ ಪಾರ್ಟಿಯವರು ಕುಂಡಕ್ಕೆ ಪೂಜೆ ಪುರಸ್ಕಾರಗಳನ್ನು ಮಾಡಿದ್ದ ಜಾಗ ಕಣ್ಣಿಗೆ ಬಿತ್ತು. ಅದರ ಹತ್ತಿರಕ್ಕೆ ಹೋಗಿ ನೋಡಿದಾಗ ತೋರಿತು, ಅವರು ಕಲ್ಲು ಗುಂಡುಗಳನ್ನು ಆ ನೀರ್ಗಲ್ಲಿನ ಮೇಲೆ ಎತ್ತಿ ಹಾಕಿ ಸ್ವಲ್ಪ ಭಾಗವನ್ನು ಒಡೆದಿರುವ ಹಾಗೆ. ಆ ನೀರ್ಗಲ್ಲಿನಲ್ಲಿ ಒಂದು

ಪುಟ್ಟ ಚೆಂಬು ಹಿಡಿಯುವಷ್ಟು ಅಗಲದ ಒಂದು ರಂಧ್ರ ಬಿದ್ದಿತ್ತು. ಅದರೊಳಗೆ ಸ್ವಚ್ಛವಾದ ನೀರು ಕಂಡಿತು. ಆ ಪುಟ್ಟ ರಂಧ್ರ ಸೂಚಿಸಿತು ನಮ್ಮ ಪಾರ್ಟಿಯವರಾರೂ ಇಲ್ಲಿ ಸ್ನಾನಮಾಡಿಲ್ಲ ಎಂಬುದನ್ನ. ನೀರು ಹೇಗಿದೆ ನೋಡೋಣ ಎಂಬುದಾಗಿ ಅದನ್ನು ಸ್ವಲ್ಪ ಕೈಗೆ ತೆಗೆದುಕೊಂಡೆ. ಕೊರೆಯುತ್ತಲೇನೊ ಇತ್ತು, ಆದರೆ ಕೇದಾರನಾಥ್‌ನಲ್ಲಿ ದೊರೆತ ಅನುಭವವನ್ನು ಅದು ಕೊಡಲಿಲ್ಲ.

ನಾನು ೧೯೪೩ ನೆ ಇಸವಿಯಲ್ಲಿ ಕೇದಾರನಾಥ್‌ಗೆ ಹೋಗಿದ್ದಾಗ ಪ್ರಾತಃಕಾಲ ಎದ್ದು ಬಂದು ಮಂದಾಕಿನಿ ನದಿಗೆ ಕೈಹಾಕಿದೆ. ಏನು ಹೇಳಲಿ! ಕೈಯ ಸ್ವಾಧೀನ ತಪ್ಪಿಹೋಗಿ ಅನೇಕ ಚೇಳುಗಳು ಒಮ್ಮೆಗೇ ಕುಟುಕಿಬಿಟ್ಟುವೊ ಏನೊ ಎಂಬಂತೆ ಕೈ ನೋಯಲಾರಂಭಿಸಿತು! ಬಳಿಕ ನಾನು ಇಳಿದುಕೊಂಡಿದ್ದ ಜಾಗಕ್ಕೆ ಓಡಿ ಓಡಿ ಬಂದು ಮುಂಬತ್ತಿಯನ್ನು ಹೊತ್ತಿಸಿ ಕೈಯನ್ನು ಸುಡಲಾರಂಭಿಸಿದೆ. ಬಳಿಕ ಆ ನೋವು ಹೋಗಿ ಕೈ ತನ್ನ ಸ್ವಾಧೀನತೆಯನ್ನು ಪಡೆದುಕೊಂಡಿತು. ಆದರೆ ಈ ನೀರು ಆ ಅನು ಭವವನ್ನು ಕೊಡಲಿಲ್ಲ.

ನಾನು ೧೯೪೫ ನೆ ಇಸವಿಯಲ್ಲಿ ಅಮರನಾಥಕ್ಕೆ ಹೋಗಿದ್ದಾಗ ಅಲ್ಲಿನ ಅಮರಗಂಗೆಯಲ್ಲಿ ಸ್ನಾನಮಾಡಿದೆ. ಅಲ್ಲಿನ ನೀರು ಅಷ್ಟು ಕೊರೆ ಯುತ್ತಿತ್ತು ಮೂರು ಸಲ ಅದಷ್ಟು ಬೇಗ ಮುಳುಕುಹಾಕುವುದರಲ್ಲೇ ಚಳಿ ತಲೆ ಬುರುಡೆಯ ಒಳಕ್ಕೆ ಬಹಳ ದೂರದವರೆಗೆ ಕೊರೆದುಕೊಂಡು ಹೋಗಿಬಿಟ್ಟಿತು. ಬಳಿಕ ಚೇತರಿಸಿಕೊಳ್ಳಲು ಬಹಳ ಸಮಯವೇ ಹಿಡಿಯಿತು.

ಈ ನೀರು ಅಮರಗಂಗೆಯ ನೀರಿಗಿಂತ ಎಲ್ಲೋ ಸ್ವಲ್ಪ ಹೆಚ್ಚಾಗಿ ಕೊರೆಯುತ್ತಿರುವಂತೆ ತೋರಿತು. ಆದರೂ ಸ್ನಾನಮಾಡಿ ನೋಡಿಯೇ ಬಿಡೋಣ ಎಂಬ ಭಾವನೆ ಬಂದು ಇನ್ನೂ ಕೆಲವು ಗುಂಡುಗಳನ್ನು ಎತ್ತಿ ಹಾಕಿ ಆ ರಂಧ್ರವನ್ನು ವಿಶಾಲಮಾಡಿದೆ. ನೋಡುತ್ತೇನೆ ಕುಂಡದ ತಳದಲ್ಲೂ ನೀರು ನೀರ್ಗಲ್ಲಾಗಿಬಿಟ್ಟಿದೆ! ಮೇಲೆ ನೀರ್ಗಲ್ಲು, ತಳದಲ್ಲಿ ನೀರ್ಗಲ್ಲು, ಮಧ್ಯೆ ಎಲ್ಲೊ ಸ್ವಲ್ಪ ಭಾಗ ಮಾತ್ರ ನೀರು. ಆಗ ಯೋಚನೆ ಬಂತು: “ಈಗ ನನ್ನೊಡನೆ ಇಲ್ಲಿ ಬೇರೆ ಯಾರೂ ಇಲ್ಲ. ತಳದಲ್ಲಿ ಕಟ್ಟಿ ರುವ ನೀರ್ಗಲ್ಲಿನ ಮೇಲೆ ಕಾಲು ಹಾಕಿದೊಡನೇ ಅದು ಜಾರಿ ನಾನು ಒಳಕ್ಕೇ ಹೋಗಿಬಿಟ್ಟರೆ ಮೇಲಕ್ಕೆ ತಲೆ ಎತ್ತುವ ಬಗೆ ಹೇಗೆ? ಮೇಲೂ

ನೀರ್ಗಲ್ಲು. ಒಂದು ಪಕ್ಷ ಬಹಳ ಎಚ್ಚರಿಕೆಯಿಂದ ಇದರೊಳಕ್ಕೆ ಇಳಿಯಲು ಸಾಧ್ಯವಾದರೂ, ಈ ನೀರಿನ ಶೈತ್ಯ ನನ್ನ ಶರೀರಕ್ಕೆ ಸ್ವಲ್ಪ ಅಧಿಕವಾಗೇ ಆಗಿಬಿಟ್ಟು ಪ್ರಜ್ಞೆತಪ್ಪಿಹೋಗಿಬಿಟ್ಟರೆ ಮಾಡುವುದೇನು? ಬಳಿಯಲ್ಲಿ ಯಾರಿದ್ದಾರೆ ನನ್ನನ್ನು ನೋಡಿಕೊಳ್ಳುವುದಕ್ಕೆ? ಕೊನೆಗೆ ನಮ್ಮ ಪಾರ್ಟಿಯವರಿಗೆ ಎಷ್ಟು ತೊಂದರೆ ಆಗಿಬಿಡುತ್ತದೆ? ಆದ್ದರಿಂದ ಈ ಸನ್ನಿವೇಶದಲ್ಲಿ ಸ್ನಾನಮಾಡಲು ಪ್ರಯತ್ನಿಸುವುದು ತೀರ ಹುಚ್ಚುತನವೆ." ಬಳಿಕ ಯೋಚನೆ ಬಂತು: "ಮೇಲಕ್ಕೆ ನೀರು ತೆಗೆದುಕೊಂಡು ಸ್ನಾನ ಮಾಡೋಣ" ಎಂದು. ಆದರೆ ಅದಕ್ಕೆ ತಕ್ಕ ಪಾತ್ರೆ ನನ್ನ ಹತ್ತಿರ ಯಾವುದೂ ಇರಲಿಲ್ಲ. ಆದ್ದರಿಂದ ಹತ್ತಿರವಿದ್ದ ಟವಲನ್ನೇ ಒದ್ದೆಮಾಡಿ ಸ್ನಾನದ ಶಾಸ್ತ್ರ ಮುಗಿಸಿದೆ. ಬಳಿಕ ಅದರ ದಡದಲ್ಲೇ ಕುಳಿತು ಪಾರ್ವತೀ ದೇವಿಯನ್ನು ನೆನೆದುಕೊಂಡು ಶ್ರೀ ಶಂಕರಾಚಾರ್ಯ ವಿರಚಿತ ಅನ್ನಪೂರ್ಣಾಸ್ತೋತ್ರವನ್ನು ಪಠಿಸಿದೆ.

ಅನ್ನಪೂರ್ಣಾಸ್ತೋತ್ರಮ್:

ನಿತ್ಯಾನಂದಕರೀ ವರಾಭಯಕರೀ ಸೌಂದರ್ಯರತ್ನಾಕರೀ
ನಿರ್ಧೂತಾಖಿಲಘೋರಪಾವನಕರೀ ಪ್ರತ್ಯಕ್ಷಮಾಹೇಶ್ವರೀ ।
ಪ್ರಾಲೇಯಾಚಲವಂಶಪಾವನಕರೀ ಕಾಶೀಪುರಾಧೀಶ್ವರೀ
ಭಿಕ್ಷಾಂ ದೇಹಿ ಕೃಪಾವಲಂಬನಕರೀ ಮಾತಾನ್ನಪೂರ್ಣೇಶ್ವರೀ ॥೧॥

ನಾನಾರತ್ನವಿಚಿತ್ರಭೂಷಣಕರೀ ಹೇಮಾಂಬರಾಡಂಬರೀ
ಮುಕ್ತಾಹಾರವಿಲಂಬಮಾನವಿಲಸದ್ವಕ್ಷೋಜಕುಂಭಾಂತರೀ ।
ಕಾಶ್ಮೀರಾಗುರುವಾಸಿತಾ ರುಚಿಕರೀ ಕಾಶೀಪುರಾಧೀಶ್ವರೀ
ಭಿಕ್ಷಾಂ ದೇಹಿ ಕೃಪಾವಲಂಬನಕರೀ ಮಾತಾನ್ನಪೂರ್ಣೇಶ್ವರೀ॥೨॥

ಯೋಗಾನಂದಕರೀ ರಿಪುಕ್ಷಯಕರೀ ಧರ್ಮಾರ್ಥನಿಷ್ಠಾಕರೀ
ಚಂದ್ರಾರ್ಕಾನಲಭಾಸಮಾನಲಹರೀ ತ್ರೈಲೋಕ್ಯರಕ್ಷಾಕರೀ ।
ಸರ್ವೈಶ್ವರ್ಯಸಮಸ್ತವಾಂಛಿತಕರೀ ಕಾಶೀಪುರಾಧೀಶ್ವರೀ
ಭಿಕ್ಷಾಂ ದೇಹಿ ಕೃಪಾವಲಂಬನಕರೀ ಮಾತಾನ್ನಪೂರ್ಣೇಶ್ವರೀ ॥೩॥

ಕೈಲಾಸಾಚಲಕಂದರಾಲಯಕರೀ ಗೌರೀ ಉಮಾ ಶಂಕರೀ
ಕೌಮಾರೀ ನಿಗಮಾರ್ಥಗೋಚರಕರೀ ಓಂಕಾರಬೀಜಾಕ್ಷರೀ ।

ಮೋಕ್ಷದ್ವಾರಕಪಾಟಪಾಟನಕರೀ ಕಾಶೀಪುರಾಧೀಶ್ವರೀ
ಭಿಕ್ಷಾಂ ದೇಹಿ ಕೃಪಾವಲಂಬನಕರೀ ಮಾತಾನ್ನಪೂರ್ಣೇಶ್ವರೀ ||೪||

ದೃಶ್ಯಾದೃಶ್ಯಪ್ರಭೂತವಾಹನಕರೀ ಬ್ರಹ್ಮಾಂಡಭಾಂಡೋದರೀ
ಲೀಲಾನಾಟಕಸೂತ್ರಭೇದನಕರೀ ವಿಜ್ಞಾನದೀಪಾಂಕುರೀ |
ಶ್ರೀ ವಿಶ್ವೇಶಮನಃಪ್ರಸಾದನಕರೀ ಕಾಶೀಪುರಾಧೀಶ್ವರೀ
ಭಿಕ್ಷಾಂ ದೇಹಿ ಕೃಪಾವಲಂಬನಕರೀ ಮಾತಾನ್ನಪೂರ್ಣೇಶ್ವರೀ ||೫||

ಉರ್ವೀಸರ್ವಜನೇಶ್ವರೀ ಭಗವತೀ ಮಾತಾನ್ನಪೂರ್ಣೇಶ್ವರೀ
ವೇಣೀನೀಲಸಮಾನಕುಂತಲಹರೀ ನಿತ್ಯಾನ್ನದಾನೇಶ್ವರೀ |
ಸರ್ವಾನಂದಕರೀ ದಶಾಶುಭಕರೀ ಕಾಶೀಪುರಾಧೀಶ್ವರೀ
ಭಿಕ್ಷಾಂ ದೇಹಿ ಕೃಪಾವಲಂಬನಕರೀ ಮಾತಾನ್ನಪೂರ್ಣೇಶ್ವರೀ||೬||

ಆದಿಕ್ಷಾಂತಸಮಸ್ತವರ್ಣನಕರೀ ಶಂಭೋಸ್ತ್ರಿಭಾವಾಕರೀ
ಕಾಶ್ಮೀರಾ ತ್ರಿಜನೇಶ್ವರೀ ತ್ರಿಲಹರೀ ನಿತ್ಯಾಂಕುರಾ ಶರ್ವರೀ |
ಕಾಮಾಕಾಂಕ್ಷಕರೀ ಜನೋದಯಕರೀ ಕಾಶೀಪುರಾಧೀಶ್ವರೀ
ಭಿಕ್ಷಾಂ ದೇಹಿ ಕೃಪಾವಲಂಬನಕರೀ ಮಾತಾನ್ನಪೂರ್ಣೇಶ್ವರೀ ||೭||

ದರ್ವೀ ಸ್ವರ್ಣವಿಚಿತ್ರರತ್ನರಚಿತಾ ದಕ್ಷೇ ಕರೇ ಸಂಸ್ಥಿತಾ
ವಾಮೇ ಸ್ವಾದುಪಯೋಧರೀ ಪ್ರಿಯಕರೀ ಸೌಭಾಗ್ಯಮಾಹೇಶ್ವರೀ |
ಭಕ್ತಾಭೀಷ್ಟಕರೀ ದೃಶಾ ಶುಭಕರೀ ಕಾಶೀಪುರಾಧೀಶ್ವರೀ
ಭಿಕ್ಷಾಂ ದೇಹಿ ಕೃಪಾವಲಂಬನಕರೀ ಮಾತಾನ್ನಪೂರ್ಣೇಶ್ವರೀ ||೮||

ಚಂದ್ರಾರ್ಕಾನಲಕೋಟಿಕೋಟಿಸದೃಶಾ ಚಂದ್ರಾಂಶುಬಿಂಬಾಧರೀ
ಚಂದ್ರಾರ್ಕಾಗ್ನಿಸಮಾನಕುಂಡಲಧರೀ ಚಂದ್ರಾರ್ಕವರ್ಣೇಶ್ವರೀ |
ಮಾಲಾಪುಸ್ತಕ ಪಾಶಕಾಂಕುಶಧರೀ ಕಾಶೀಪುರಾಧೀಶ್ವರೀ
ಭಿಕ್ಷಾಂ ದೇಹಿ ಕೃಪಾವಲಂಬನಕರೀ ಮಾತಾನ್ನಪೂರ್ಣೇಶ್ವರೀ ||೯||

ಕ್ಷತ್ರತ್ರಾಣಕರೀ ಮಹಾಭಯಕರೀ ಮಾತಾ ಕೃಪಾಸಾಗರೀ
ಸಾಕ್ಷಾನ್ಮೋಕ್ಷಕರೀ ಸದಾ ಶಿವಕರೀ ವಿಶ್ವೇಶ್ವರ ಶ್ರೀಧರೀ |
ದಕ್ಷಾಕ್ರಂದಕರೀ ನಿರಾಮಯಕರೀ ಕಾಶೀಪುರಾಧೀಶ್ವರೀ
ಭಿಕ್ಷಾಂ ದೇಹಿ ಕೃಪಾವಲಂಬನಕರೀಮಾತಾನ್ನಪೂರ್ಣೇಶ್ವರೀ||೧೦||

ಅನ್ನಪೂರ್ಣೇ ಸದಾಪೂರ್ಣೇ ಶಂಕರಪ್ರಾಣವಲ್ಲಭೇ |
ಜ್ಞಾನವೈರಾಗ್ಯಸಿದ್ಧ್ಯರ್ಥಂ ಭಿಕ್ಷಾಂ ದೇಹಿ ಚ ಪಾರ್ವತಿ ||೧೧||

ಮಾತಾ ಮೇ ಪಾರ್ವತೀ ದೇವಿ ಪಿತಾ ದೇವೋ ಮಹೇಶ್ವರಃ |
ಬಾಂಧವಾಃ ಶಿವಭಕ್ತಾಶ್ಚ ಸ್ವದೇಶೋ ಭುವನತ್ರಯಮ್ ||೧೨||

೧. ನಿತ್ಯಾನಂದವನ್ನು ಕೊಡತಕ್ಕವಳಾದ, ವರ ಅಭಯ ಇವನ್ನು ನೀಡತಕ್ಕವಳಾದ, ಎಲ್ಲಾ ಘೋರ ಪಾತಕಗಳಿಂದ ಮುಕ್ತರನ್ನಾಗಿ ಮಾಡ ತಕ್ಕವಳಾದ, ಸಾಕ್ಷಾತ್ ಮಾಹೇಶ್ವರಿಯೇ ಆದ, ಹಿಮವತ್ಪರ್ವತ ರಾಜನ ವಂಶವನ್ನು ಉದ್ಧಾರ ಮಾಡತಕ್ಕವಳಾದ, ಸೌಂದರ್ಯಾಂಬುಧಿಯೇ ಆದ ಹೇ ಕಾಶೀಪುರಾಧೀಶ್ವರಿ! ಹೇ ಅನ್ನಪೂರ್ಣಾ! ಹೇ ತಾಯಿ! ಕೃಪೆಯಿಟ್ಟು ನನಗೆ ಭಿಕ್ಷೆ ನೀಡು.

೨. ವಿವಿಧ ರತ್ನಗಳಿಂದ ಅಲಂಕೃತಳಾದ, ಚಿನ್ನದ ಜರಿ ಸೀರೆಯನ್ನು ಉಟ್ಟವಳಾದ, ಎದ್ದು ಕಾಣುತ್ತಿರುವ ವಕ್ಷಸ್ಥಳದ ಮೇಲೆ ಥಳಥಳಿಸುತ್ತಿರುವ ಮುಕ್ತಾಹಾರವನ್ನು ಧರಿಸಿರುವವಳಾದ, ಕುಂಕುಮ ಕೇಸರಿಯ ಮತ್ತು ಗಂಧಚಂದನಗಳ ಪರಿಮಳವನ್ನು ಹೊರಸೂಸುತ್ತಿರುವವ ಳಾದ, ಕಣ್ಣಿಗೆ ಪ್ರಿಯವಾಗಿ ತೋರುತ್ತಿರುವವಳಾದ, ಹೇ ಕಾಶಿಪುರಾಧೀ ಶ್ವರಿ! ಹೇ ಅನ್ನಪೂರ್ಣಾ! ಹೇ ತಾಯಿ! ಕೃಪೆಯಿಟ್ಟು ನನಗೆ ಭಿಕ್ಷೆ ನೀಡು.

೩. ಯೋಗಾನಂದವನ್ನು ಕೊಡತಕ್ಕವಳಾದ, ಶತ್ರುಗಳನ್ನು ಸಂಹಾರ ಮಾಡತಕ್ಕವಳಾದ, ಧರ್ಮ ಅರ್ಥ ನಿಷ್ಠೆ ಇವನ್ನು ಕೊಡತಕ್ಕ ವಳಾದ, ಚಂದ್ರ ಅಗ್ನಿ ಸೂರ್ಯ ಇವರ ತೇಜಸ್ಸನ್ನು ಮೀರಿಸಿದವಳಾದ, ಮೂರು ಲೋಕಗಳನ್ನು ರಕ್ಷಿಸುತ್ತಿರುವವಳಾದ, ಎಲ್ಲಾ ಐಶ್ವರ್ಯಗಳನ್ನು ಮತ್ತು ಕೇಳಿದುವೆಲ್ಲವನ್ನು ಕೊಡತಕ್ಕವಳಾದ, ಹೇ ಕಾಶೀಪುರಾಧೀಶ್ವರಿ! ಹೇ ಅನ್ನಪೂರ್ಣಾ! ಹೇ ತಾಯಿ! ಕೃಪೆಯಿಟ್ಟು ನನಗೆ ಭಿಕ್ಷೆ ನೀಡು.

೪. ನಿಗಮಗಳ ಅರ್ಥವನ್ನು ತೋರಿಸಿಕೊಡುವವಳಾದ, ಓಂಕಾರ ಬೀಜಾಕ್ಷರ ಸ್ವರೂಪಳಾದ, ಮೋಕ್ಷದ್ವಾರದ ಬಾಗಿಲನ್ನು ತೆರೆದಿಡತಕ್ಕ ವಳಾದ, ಕೈಲಾಸಪರ್ವತದ ಗುಹೆಯಲ್ಲಿ ವಾಸಿಸುತ್ತಿರುವವಳಾದ ಹೇ ಗೌರಿ! ಹೇ ಉಮಾ! ಹೇ ಶಂಕರಿ! ಹೇ ಕೌಮಾರಿ! ಹೇ ಕಾಶೀಪುರಾ ಧೀಶ್ವರಿ! ಹೇ ಅನ್ನಪೂರ್ಣಾ! ಕೃಪೆಯಿಟ್ಟು ನನಗೆ ಭಿಕ್ಷೆ ನೀಡು.

೫. ದೃಶ್ಯ ಅದೃಶ್ಯ ಜಗತ್ತನ್ನೆಲ್ಲಾ ಹೊತ್ತಿರುವವಳಾದ, ಬ್ರಹ್ಮಾಂಡವನ್ನೇ ಉದರದಲ್ಲಿ ಧರಿಸಿರುವವಳಾದ, ನಮ್ಮ ಈ ಜಗತ್ತಿನ ಲೀಲಾ ನಾಟಕ ಸೂತ್ರವನ್ನು ಕತ್ತರಿಸತಕ್ಕವಳಾದ, ವಿಜ್ಞಾನ ದೀಪವನ್ನು ನಮ್ಮ ಅಂತರ್ಯದಲ್ಲಿ ಹೊತ್ತಿಸಬಲ್ಲವಳಾದ, ಶ್ರೀ ವಿಶ್ವೇಶ್ವರನ ಮನಸ್ಸನ್ನು ಪ್ರಸಾದಗೊಳಿಸಬಲ್ಲವಳಾದ, ಹೇ ಕಾಶೀಪುರಾಧೀಶ್ವರಿ! ಹೇ ಅನ್ನಪೂರ್ಣಾ! ಹೇ ತಾಯೆ! ಕೃಪೆಯಿಟ್ಟು ನನಗೆ ಭಿಕ್ಷೆ ನೀಡು.

೬. ಮೊಳಕಾಲಿನವರೆಗೂ ಇಳಿಬಿದ್ದು ನೀಲರತ್ನದೋಪಾದಿಯಲ್ಲಿ ಥಳಥಳಿಸುತ್ತಿರುವ ಜಡೆಯುಳ್ಳವಳಾದ, ನಮಗೆ ಬೇಕಾದ ಆಹಾರ ಕೊಡಲು ಸತತ ಕಾತರಳಾಗಿರುವವಳಾದ, ನಮಗೆ ಎಲ್ಲಾ ಆನಂದಗಳನ್ನು ಕೊಡಲು ಯಾವಾಗಲೂ ಸಿದ್ಧಳಾಗಿರುವವಳಾದ, ನಮಗೆ ಸಕಲ ಶುಭಗಳನ್ನು ಮಳೆಗರೆಯಲು ಸತತ ಆಕಾಂಕ್ಷಿತಳಾಗಿರುವವಳಾದ, ಈ ಜಗತ್ತಿನ ಒಡತಿಯಾಗಿರುವವಳಾದ ಹೇ ಕಾಶೀಪುರಾಧೀಶ್ವರಿ! ಹೇ ಭಗವತಿ! ಹೇ ಅನ್ನಪೂರ್ಣಾ! ಹೇ ತಾಯೆ! ಕೃಪೆಯಿಟ್ಟು ನನಗೆ ಭಿಕ್ಷೆ ನೀಡು.

೭. ಮೊದಲಿನಿಂದ ಕೊನೆಯವರೆಗಿನ ಎಲ್ಲಾ ವರ್ಣಾಕ್ಷರಗಳನ್ನೂ ತೋರಿಸಬಲ್ಲವಳಾದ, ಸ್ಥೂಲ ಮತ್ತು ಸೂಕ್ಷ್ಮ ಜಗತ್ತಿನ ತಾಯಿಯಾದ ಮತ್ತು ಅದರ ಒಡತಿಯೂ ಆದ, ಸ್ವರ್ಗ ಮರ್ತ್ಯ ಪಾತಾಳದ ಚಕ್ರವರ್ತಿನಿಯಾದ, ಸೃಷ್ಟಿಸ್ಥಿತಿಪ್ರಳಯಕಾರಿಣಿಯಾದ, ಸತ್ಯಳಾದ, ಸ್ವಯಂಭೂ ಆದ, ಮಹಾಪ್ರಳಯರೂಪಿಣಿಯಾದ, (ಜನರ ಹೃದಯದಲ್ಲಿ) ಕಾಮಾಕಾಂಕ್ಷೆಗಳನ್ನು ಹುಟ್ಟಿಸುವವಳಾದ, ಜನರಿಗೆ ಶ್ರೇಯಸ್ಸು ತರುವವಳಾದ ಹೇ ಕಾಶೀಪುರಾಧೀಶ್ವರಿ! ಹೇ ಅನ್ನಪೂರ್ಣಾ! ಹೇ ತಾಯೆ! ಕೃಪೆಯಿಟ್ಟು ನನಗೆ ಭಿಕ್ಷೆ ನೀಡು.

೮. ಅನೇಕ ವಿಧದ ರತ್ನಗಳನ್ನು ಮೆಟ್ಟಿದ ಚಿನ್ನದ ಸೌಟನ್ನು ಬಲಗೈಯಲ್ಲಿ ಹಿಡಿದುಕೊಂಡಿರುವವಳಾದ, ಎಡಗೈಯಲ್ಲಿ ಬಹಳ ರುಚಿಯಾದ ಆಹಾರವನ್ನು ಹಿಡಿದುಕೊಂಡಿರುವವಳಾದ, ಹಿತವನ್ನು ಮಾಡತಕ್ಕವಳಾದ, ಸೌಭಾಗ್ಯವನ್ನು ಕೊಡತಕ್ಕವಳಾದ, ಭಕ್ತಾಭೀಷ್ಟಗಳನ್ನು ಪೂರ್ಣಮಾಡುವವಳಾದ, ರೆಪ್ಪೆ ಹೊಡೆಯುವ ಮಾತ್ರದಿಂದಲೇ ಶುಭವನ್ನು ತರತಕ್ಕವಳಾದ ಹೇ ಕಾಶೀಪುರಾಧೀಶ್ವರಿ! ಹೇ ಅನ್ನಪೂರ್ಣಾ! ಹೇ ತಾಯೆ! ಕೃಪೆಯಿಟ್ಟು ನನಗೆ ಭಿಕ್ಷೆ ನೀಡು.

೯. ಚಂದ್ರ ಅಗ್ನಿ ಸೂರ್ಯ ಇವರ ತೇಜಸ್ಸಿಗಿಂತಲೂ ಕೋಟಿ ಕೋಟಿ ಪಾಲು ಮಿಗಿಲಾದ ತೇಜಸ್ಸುಳ್ಳ, ಚಂದ್ರನ ಬೆಳಕಿನಂಥ ಬೆಳಕನ್ನು ಕೊಡುವ ತುಟಿಯುಳ್ಳ, ಚಂದ್ರ ಅಗ್ನಿ ಸೂರ್ಯ ಇವರ ಪ್ರಭೆಯಂತೆ ಹೊಳೆಯುತ್ತಿರುವ ಕುಂಡಲಗಳನ್ನು ಕಿವಿಯಲ್ಲಿ ಧರಿಸಿರುವ, ಚಂದ್ರ ಸೂರ್ಯ ಇವರ ಕಾಂತಿಯಂತೆ ಕಾಂತಿಯುಳ್ಳ ಶರೀರವುಳ್ಳವಳಾದ, ಜಪಮಾಲೆ, ಪುಸ್ತಕ, ಪಾಶ, ಅಂಕುಶ ಇವನ್ನು ತನ್ನ ನಾಲ್ಕು ಕೈಗಳಲ್ಲೂ ಹಿಡಿದುಕೊಂಡಿರುವವಳಾದ ಹೇ ಕಾಶೀಪುರಾಧೀಶ್ವರಿ ! ಹೇ ಅನ್ನಪೂರ್ಣಾ ! ಹೇ ತಾಯಿ ! ಕೃಪೆಯಿಟ್ಟು ನನಗೆ ಭಿಕ್ಷೆ ನೀಡು.

೧೦. ಕ್ಷತ್ರಿಯಕುಲವನ್ನು ರಕ್ಷಿಸುತ್ತಿರುವವಳಾದ, ಪೂರ್ಣ ಅಭಯವನ್ನು ಕೊಡತಕ್ಕವಳಾದ, ಕೃಪೆಯ ಸಾಗರವೇ ಆದ, ಜಗಜ್ಜನನಿಯಾದ, ನಿಜವಾದ ಮೋಕ್ಷವನ್ನು ಕೊಡಬಲ್ಲವಳಾದ, ಯಾವಾಗಲೂ ಮಂಗಳವನ್ನು ಕರೆಯುವವಳಾದ, ವಿಶ್ವೇಶ್ವರನ ಕ್ಷೇಮವನ್ನು ನೋಡಿಕೊಳ್ಳುತ್ತಿರುವವಳಾದ, ದಕ್ಷನನ್ನು ಅಳುವಂತೆ ಮಾಡಿದವಳಾದ, ದೈಹಿಕ ಸಕಲ ರೋಗಗಳನ್ನೂ ನಿವಾರಿಸುವ ಶಕ್ತಿಯುಳ್ಳವಳಾದ, ಹೇ ಕಾಶೀಪುರಾಧೀಶ್ವರಿ ! ಹೇ ಅನ್ನಪೂರ್ಣಾ ! ಹೇ ತಾಯಿ ! ಕೃಪೆಯಿಟ್ಟು ನನಗೆ ಭಿಕ್ಷೆ ನೀಡು.

೧೧. ಸಕಲ ಅಭೀಷ್ಟಗಳನ್ನೂ ಸತತ ಪೂರ್ಣಮಾಡುವ ಶಕ್ತಿಯುಳ್ಳವಳಾದ, ಶಂಕರನ ಪ್ರಾಣವಲ್ಲಭೆಯಾದ, ಹೇ ಅನ್ನಪೂರ್ಣಾ ! ಹೇ ಪಾರ್ವತಿ ! ಜ್ಞಾನ ವೈರಾಗ್ಯದ ಭಿಕ್ಷೆಗಾಗಿ ನಿನ್ನನ್ನು ಯಾಚಿಸುತ್ತಿದೇನೆ. ದಯವಿಟ್ಟು ಅದನ್ನು ಕೃಪೆಮಾಡು.

೧೨. ಪಾರ್ವತೀದೇವಿಯೇ ನನ್ನ ತಾಯಿ, ಮಹೇಶ್ವರನೇ ನನ್ನ ತಂದೆ; ಇವರೀರ್ವರ ಭಕ್ತರೇ ನನ್ನ ಬಂಧುಬಾಂಧವರು, ಮೂರು ಲೋಕಗಳೇ ನನ್ನ ನಿವಾಸಸ್ಥಾನ.

ಈಗಲೂ ಸಕಲ ಜೀವರಾಶಿಗಳ ಹಿತಚಿಂತನೆಗೆ ಪ್ರಾರ್ಥನೆ ಮಾಡಿದೆ. ಬಳಿಕ ಗೌರೀಕುಂಡದ ತೀರ್ಥವನ್ನು ಒಂದು ಸೀಸೆಗೆ ತುಂಬಿಕೊಂಡು ಇಲ್ಲಿನ ಸುತ್ತಮುತ್ತಲ ಮನೋಹರ ದೃಶ್ಯವನ್ನು ನೋಡುತ್ತ ನೋಡುತ್ತ ಕೆಳಕ್ಕೆ ಇಳಿಯಲಾರಂಭಿಸಿದೆ.

ಈಗ ದಾರಿ ಸ್ವಲ್ಪ ದೂರದವರೆಗೆ ದೊಡ್ಡ ದೊಡ್ಡ ಕಲ್ಲುಬಂಡೆಗಳನ್ನು ಒಡೆದೊಡೆದು ಚೆನ್ನಾಗಿ ಪೇರಿಸಿರುವಂತೆ ತೋರುತ್ತಿದ್ದ ಪ್ರದೇಶದಲ್ಲಿ ಮುಂದುವರಿಯಲಾರಂಭಿಸಿತು. ಆ ಕಲ್ಲುಗಳ ಸಂದಿಗೊಂದಿಗಳ ಮೂಲಕ ಗೌರೀಕುಂಡದಿಂದ ಜಿನುಗಿಬಂದ ನೀರು ಕೆಳಕ್ಕೆ ಇಳಿದು ಹೋಗುತ್ತಿತ್ತು. ಸಾಮಾನು ಹೊತ್ತು ಹೋಗುತ್ತಿದ್ದ ನಮ್ಮ ಚಮರೀಮೃಗಗಳು ಎಷ್ಟೆಷ್ಟು ಜಾಣ್ಮೆಯಿಂದ ಆ ಕಲ್ಲು ಬಂಡೆಗಳ ದಾರಿಯಲ್ಲಿ ನಡೆಯುತ್ತಿದ್ದುವು ಎಂಬು ದನ್ನು ಕಣ್ಣಿನಿಂದ ನೋಡಬೇಕಾದ್ದೇ ಆಗಿತ್ತು. ನಾವು ಆ ದಾರಿಯಲ್ಲಿ ಹಾಗೇ ಮುಂದುವರಿದು ಗೌರೀಕುಂಡದಿಂದ ಇಳಿದುಬಂದ ನೀರು ನದಿಯ ರೂಪವನ್ನು ತಾಳಿರುವ ಪ್ರದೇಶಕ್ಕೆ ಬಂದೆವು. ಇಲ್ಲಿಂದಾಚೆಗೆ ಸ್ವಲ್ಪ ದೂರದವರೆಗೆ ಕೈಲಾಸಪರ್ವತದ ಓಡೆಯಲ್ಲಿ, ಮಾನಸಸರೋವರದ ಹತ್ತಿರ ಕಂಡು ಬಂದಂಥ ಸುವಾಸನೆಯ ಗಿಡಗಳಲ್ಲ, ಬೇರೊಂದು ವಿಧದ ಸುವಾಸನೆಯ ಗಿಡಗಳು ಬೆಳೆದಿದ್ದುವು. "ಕೈಲಾಸಧೂಪ" ಎಂಬುದು ಇದೇ ಎಂಬುದಾಗಿ ನಮ್ಮ ಕೂಲಿಯವರು ನನಗೆ ತಿಳಿಸಿ ಅವುಗಳಲ್ಲಿ ಕೆಲವನ್ನು ನನಗೆ ಕಿತ್ತುಕೊಟ್ಟರು. ಇಲ್ಲಿಯೂ ಕೆಲವು ಬಣ್ಣದ ಕಲ್ಲುಗಳು ಬಿದ್ದಿದ್ದುವು. ಅವನ್ನು ಸ್ವಲ್ಪ ಆಯ್ದುಕೊಂಡೆ. ಬಳಿಕ ಈ ನದಿಯ ಬಲ ಭಾಗದಲ್ಲೇ ಮುಂದುವರಿದು ದಿಂಡ್ರಿಫುವನ್ನು ತಲುಪಿ ನದಿಯ ದಡದಲ್ಲೇ ಬಿಡಾರಬಿಟ್ಟೆವು.

## ದಿಂಡ್ರಿಫುವಿನಿಂದ ಥಮ್ಚುವಿಗೆ

೧೬,೨೦೦ ಅಡಿ ಎತ್ತರದಿಂದ ೧೫,೦೦೦ ಅಡಿ ಎತ್ತರಕ್ಕೆ. ದೂರ ೧೦ ಮೈಲಿ.

ಪ್ರಯಾಣ ಬೆಳಗಿನ ೭–೩೦ ರಿಂದ ಅಪರಾಹ್ನ ೧–೩೦ ರ ವರೆಗೆ.

ತಾ|| ೮-೭-'೫೧ ಭಾನುವಾರ.

ಇಂದು ಸ್ವಲ್ಪ ದೂರ ನದಿಯ ಬಲಭಾಗದಲ್ಲೇ ಮುಂದುವರಿದು ಬಳಿಕ ಅದನ್ನು ದಾಟಿ ಅದರ ಎಡಭಾಗಕ್ಕೆ ಬಂದೆವು. ಎಡಭಾಗದಲ್ಲೇ ಬಹಳ ದೂರ ಮುಂದುವರಿದು ಅನಂತರ ನದಿಯ ದಡವನ್ನು ಬಿಟ್ಟು ಒಂದು ತಿಟ್ಟನ್ನು ಹತ್ತಿದೆವು. ಬಳಿಕ ಮುಳ್ಳು ಪೊದೆಗಳ ಮಾರ್ಗವಾಗೇ ಮುಂದು ವರಿದು ಥಮ್ಚುವನ್ನು ತಲುಪಿದೆವು. ಇಂದಿನ ದಾರಿ ಅಷ್ಟು ಕಷ್ಟವಾಗೇನು ಇರಲಿಲ್ಲ. ಇಲ್ಲಿಗೆ ಬಂದಾಗ ಮತ್ತೆ ಕೈಲಾಸಪತಿ ಕಾಣಿಸಿಕೊಂಡ.

ಮೂರು ದಿನಗಳ ಹಿಂದೆ ನಾವು ಈ ಪ್ರದೇಶವನ್ನು ಬಿಟ್ಟು ಕೈಲಾಸ ಗಿರಿಯ ಪ್ರದಕ್ಷಿಣೆಗೆ ಹೊರಟಾಗ ಚೀಣೀಯರು ಇಲ್ಲಿಯವರೆಗೆ ಇನ್ನೂ

ಬಂದಿರಲಿಲ್ಲ. ಆದರೆ ಈಗ ನೋಡುತ್ತೇವೆ, ಇಲ್ಲಿಂದ ಸುಮಾರು ಮೂರು ಮೈಲಿ ದೂರದಲ್ಲಿರುವ ಪರ್ಕ ಎಂಬ ಹಳ್ಳಿಗೆ ಬಂದು ಆಗಲೆ ಪಾಳೆಯ ಬಿಟ್ಟುಬಿಟ್ಟದಾರೆ. ಸಾಯಂಕಾಲ ಆರು ಘಂಟೆಯ ಸಮಯಕ್ಕೆ ಅವರ ಪಾಳೆಯದಿಂದ ನಾಲ್ಕು ಜನ ಸಿಪಾಯಿಗಳು ಬಂದು ನಮ್ಮ ಗೈಡನ್ನು ಮತ್ತು ನಮ್ಮ ಪಾರ್ಟಿಯವರಲ್ಲಿ ಒಬ್ಬರನ್ನು ಅಲ್ಲಿಗೆ ಕರೆದುಕೊಂಡು ಹೋದರು. ಅಲ್ಲಿ ಅವರು ನಾವು ಯಾರು ಎಂತು ಎಂಬುದನ್ನು ವಿಚಾರಿಸಿ ಹೇಳಿದರಂತೆ: "ನಮಗೂ (ಚೀಣೀಯರಿಗೂ) ನಿಮಗೂ (ಭಾರತೀಯರಿಗೂ) ಯಾವ ವಿಧವಾದ ಮನಸ್ತಾಪವೂ ಇಲ್ಲ. ಸಾಂಸ್ಕೃತಿಕವಾಗಿ ನಾವೀರ್ವರೂ ಒಂದೇ ಮನೆತನಕ್ಕೆ ಸೇರಿದವರೆ. ಆದ್ದರಿಂದ ನೀವು ಯಾವ ಆತಂಕವೂ ಇಲ್ಲದೆ ಭಾರತಕ್ಕೆ ಹಿಂದಿರುಗಬಹುದು." ನಮ್ಮ ಪಾರ್ಟಿಯವರು ಅಲ್ಲಿಂದ ಹಿಂದಿರುಗುವಾಗ ಸ್ವಲ್ಪ ಉಪಾಹಾರ ಮಾಡಿಸಿಯೂ ಕಳಿಸಿದರಂತೆ. ಅವರು ಹಿಂದಿರುಗಿ ಬರುವುದರಲ್ಲಿ ರಾತ್ರಿ ಹನ್ನೊಂದು ಘಂಟೆ ಆಗಿಬಿಟ್ಟಿತು. ಚೀಣೀಯರ ಈ ನಡತೆಯನ್ನು ನೋಡಿ ನಮಗೆ ಬಹಳ ಆನಂದ ಆಗಿಬಿಟ್ಟಿತು.



೮

# ಕೈಲಾಸಗಿರಿಯಿಂದ ನೀಲಗಿರಿಗೆ

ಈಗ ನಮಗೆ ಮಾನಸಸರೋವರದ ದರ್ಶನ ದೊರೆಯಿತು, ಕೈಲಾಸ ಪತಿಯ ದರ್ಶನ ದೊರೆಯಿತು, ಕೈಲಾಸಗಿರಿಯ ಪ್ರದಕ್ಷಿಣೆ ಮಾಡಿದುದೂ ಆಯಿತು. ಎಂದರೆ, ನಮ್ಮ ಯಾತ್ರೆಯ ಉದ್ದೇಶ ಸಾಫಲ್ಯಗೊಂಡಂತಾ ಯಿತು. ನಮ್ಮ ಕನಸು ನನಸಾಯಿತು. ಇನ್ನು ಉಳಿದುಕೊಂಡಿದುದು ತಾಕ್ಲಕೋಟೆಗೆ ಹಿಂದಿರುಗಿ ಅಲ್ಲಿಂದ ನಮ್ಮ ನಮ್ಮ ಸ್ವಸ್ಥಾನಗಳಿಗೆ ಹಿಂದಿ ರುಗುವುದು.

## ಥಮ್ಚುವಿನಿಂದ ತುರಿರಾಕ್ಕೆ

**೧೫,೦೦೦ ಅಡಿ ಎತ್ತರದಿಂದ ೧೪,೮೫೦ ಅಡಿ ಎತ್ತರಕ್ಕೆ. ದೂರ ೧೨ ಮೈಲಿ.**

**ಪ್ರಯಾಣ ಬೆಳಗಿನ ೬–೩೦ ರಿಂದ ಅಪರಾಹ್ಣ ೨-೩೦ ರ ವರೆಗೆ.**

**ತಾ|| ೯-೬-'೫೧, ಸೋಮವಾರ.**

ಥಮ್ಚುವನ್ನು ಬಿಟ್ಟನಂತರ ಆ ವಿಶಾಲವಾದ ಮೈದಾನದಲ್ಲೇ ಮುಂದುವರಿದು ಪರ್ಕ ಎಂಬ ಹಳ್ಳಿಗೆ ಬಂದೆವು. ಆ ಹಳ್ಳಿಯಲ್ಲಿ ಇದ್ದ ಮನೆಗಳು ಕೇವಲ ಐದಾರೇ. ಅಲ್ಲಿಂದಾಚೆಗೆ ಸ್ವಲ್ಪ ದೂರ ರಾವಣನ ಸರೋವರದ ಪೂರ್ವದಡದಲ್ಲೇ ಮುಂದುವರಿದು ಒಂದು ತಿಟ್ಟಿನ ಹತ್ತಿರಕ್ಕೆ ಬಂದು ಸ್ವಲ್ಪ ವಿಶ್ರಮಿಸಿಕೊಳ್ಳಲಾರಂಭಿಸಿದೆವು. ಆಗ ಕಾಡುಕುದುರೆಗಳ ಒಂದು ಹಿಂಡು ನಮ್ಮ ಬಳಿಯಲ್ಲೇ ಮಿಂಚಿನ ವೇಗದಲ್ಲಿ ಓಡಿಹೋದುವು. ಅವು ಅಂಥಾ ವೇಗದಲ್ಲಿ ಓಡುತ್ತಿದ್ದುವು, ಕೆಲವು ನಿಮಿಷಗಳಲ್ಲೇ ಬಹಳ ದೂರ ಮುಂದುವರಿದು ಅದೃಶ್ಯವಾಗಿಬಿಟ್ಟುವು. ನಾನು ಅವನ್ನು ಒಂದೊಂದಾಗಿ ಎಣಿಸಿದೆ. ಅವು ಒಟ್ಟು ನಲವತ್ತು ಇದ್ದುವು.

ಅಲ್ಲಿಂದ ಮುಂದುವರಿದನಂತರ ಇನ್ನೂ ಎರಡು ಎತ್ತರವಾದ ತಿಟ್ಟು ಗಳನ್ನು ಹತ್ತಿ ತುರಿರಾ ಎಂಬ ಪ್ರದೇಶಕ್ಕೆ ಬಂದೆವು. ಇದು ಇರುವುದೂ ರಾವಣನ ಸರೋವರದ ದಡದಲ್ಲೇ. ಈ ರಾವಣನ ಸರೋವರದ ವೈಶಿಷ್ಟ್ಯ

ವೇನೆಂದರೆ, ಇದು ಮಾನಸಸರೋವರದ ಹಾಗೆ ಬಹು ಮಟ್ಟಿಗೆ ಗುಂಡಾಗಿ ರದೆ ಮೂಲೆ ಮೂಲೆಯಾಗಿ ಹಬ್ಬಿಕೊಂಡಿದೆ. ಈ ರೀತಿಯಾಗಿ ಇದು ಹಬ್ಬಿ ಕೊಂಡಿರುವುದರಿಂದ ಇದು ಬಹಳ ಸುಂದರವಾಗಿ ಕಾಣಬರುತ್ತದೆ. ಇದರಲ್ಲಿ ಕೈಲಾಸಪರ್ವತ ಬಹಳ ಚೆನ್ನಾಗಿ ಪ್ರತಿಬಿಂಬಿತವಾಗುತ್ತದೆ. ಇದರ ಮಧ್ಯ ದಲ್ಲಿ ಒಂದೆರಡು ದ್ವೀಪಗಳಿರುವುದು ಕಣ್ಣಿಗೆ ಬಿತ್ತು. ಇದರ ನೀರು ಮಾನಸಸರೋವರದ ಹಾಗೆ ಸಿಹಿಯಾಗಿರದೆ ಉಪ್ಪುಪ್ಪಾಗಿದೆ. ಆದರೂ ಈ ನೀರನ್ನೇ ನಾವು ಊಟೋಪಚಾರಗಳೆಲ್ಲಕ್ಕೂ ಉಪಯೋಗಿಸಬೇಕಾ ಯಿತು. ಇದರ ದಡದಲ್ಲೂ ಬೇಕಾದಷ್ಟು ಸುಂದರ ಸುಂದರವಾದ ಕಲ್ಲು ಗಳು ಬಿದ್ದಿದ್ದುವು. ಇಂದಿನ ದಿನ ಇಲ್ಲಿ ಇಡೀ ರಾಮಾಯಣ ನನ್ನ ಕಣ್ಣು ಮುಂದೆ ಸುಳಿದುಹೋಯಿತು.

## ತುರಿರಾದಿಂದ ಸೇಕಾಂಗಿಗೆ

೧೪,೮೫೦ ಅಡಿ ಎತ್ತರದಿಂದ ೧೪,೦೦೦ ಅಡಿ ಎತ್ತರಕ್ಕೆ. ದೂರ ೧೩–೧೪ ಮೈಲಿ.

ಪ್ರಯಾಣ ಬೆಳಗಿನ ೮ ರಿಂದ ಅಪರಾಹ್ಣ ೩–೪೫ ರ ವರೆಗೆ.

ತಾ|| ೧೦-೭-'೫೧ ಮಂಗಳವಾರ.

ಇಂದು ಬಹಳ ದೂರದವರೆಗೆ ರಾವಣನ ಸರೋವರದ ದಡದಲ್ಲೇ ಮುಂದುವರಿದೆವು. ದಾರಿಯ ಉದ್ದಕ್ಕೂ ಕೈಲಾಸಶಿಖರ ಈ ಸರೋವರ ದಲ್ಲಿ ಬಹಳ ಚೆನ್ನಾಗಿ ಪ್ರತಿಬಿಂಬಿತವಾಗುತ್ತಿತ್ತು. ಒಂದು ದಿವ್ಯ ಜ್ಯೋತಿ ಮೇಲಕ್ಕೆ ಎದ್ದು ಬರುವುದರಲ್ಲಿದೆಯೋ ಏನೊ ಎಂಬಂತೆ ಕಾಣುತ್ತಿತ್ತು. ಕೊನೆಗೆ ರಾವಣನ ಸರೋವರದ ದಡವನ್ನು ಬಿಟ್ಟು ಎತ್ತರವಾದ ತಿಟ್ಟನ್ನು ಹತ್ತಲು ಶುರುಮಾಡಿದೆವು. ಆಗ ನಮ್ಮ ಗೈಡು ಹೇಳಿದ: "ಸ್ವಾಮಿಜಿ, ಈ ದಿಣ್ಣೆಯಿಂದ ಕೆಳಕ್ಕೆ ಇಳಿದನಂತರ ಮತ್ತೆ ನಮಗೆ ಕೈಲಾಸಪತಿಯ ದರ್ಶನ ಆಗುವಹಾಗಿಲ್ಲ. ಆದ್ದರಿಂದ ಈಗ ಆತನ ಕಟ್ಟಕಡೆಯ ದರ್ಶನ ವನ್ನು ಚೆನ್ನಾಗಿ ಮಾಡಿಕೊಂಡುಬಿಡಿ."

ಆ ತಿಟ್ಟಿನ ತುತ್ತತುದಿಯನ್ನು ಮುಟ್ಟಿದನಂತರ ಎಲ್ಲರೂ ಕೈಲಾಸ ಪತಿಗೆ ಸಾಷ್ಟಾಂಗಪ್ರಣಾಮ ಮಾಡಿದೆವು. ಎಲ್ಲರ ಕಣ್ಣಿನಿಂದಲೂ ನೀರು ಹರಿಯಲಾರಂಭಿಸಿತು. ಇಂಥ ಸುಂದರ ಪ್ರದೇಶವನ್ನು ಬಿಟ್ಟು ಮುಂದು ವರಿಯುವುದು ಹೇಗೆ ಎಂಬ ವ್ಯಥೆ ಪ್ರತಿಯೊಬ್ಬರ ಹೃದಯವನ್ನೂ ಪೀಡಿಸ ಲಾರಂಭಿಸಿತು. ತಾಯನ್ನು ಅಗಲಿ ಪರ ಊರಿಗೆ ವಿದ್ಯಾಭ್ಯಾಸಕ್ಕಾಗಿ

ಹೋಗಿ ಇರಬೇಕಾದ ಬಾಲಕನ ದುಃಖಕ್ಕಿಂತ ಅಧಿಕವಾದ ದುಃಖ ನನಗಾಗಲಾರಂಭಿಸಿತು. ಜೀವ ಹೇಳಲಾರಂಭಿಸಿತು: "ಇಚ್ಛೆಬಂದರೆ ನನ್ನನ್ನು ಇಲ್ಲೇ ಕೊಂದುಹಾಕಿಬಿಡು. ನಾನು ಮಾತ್ರ ಈ ಸ್ಥಳದಿಂದ ಹಿಂದಿರುಗಲೊಲ್ಲೆ." ಆದರೆ ಏನು ಮಾಡುವುದು? ವಿಧಿಯಿಲ್ಲದೆ ಹಿಂದಿರುಗಲೇ ಬೇಕಾಗಿತ್ತು. ಸಮಯ ಆಗ ೨-೨೦. ಬಳಿಕ ಆ ತಿಟ್ಟಿನಿಂದ ಸ್ವಲ್ಪ ದೂರ ಕೆಳಕ್ಕೆ ಇಳಿದೆ. ಇನ್ನೊಮ್ಮೆ ಕೈಲಾಸಪತಿಯ ದರ್ಶನ ಮಾಡಬೇಕೆಂದು ಮನಸ್ಸು ನನ್ನನ್ನು ಬಲಾತ್ಕರಿಸಿತು. ಮತ್ತೆ ಹತ್ತಿದೆ. ಇದೇ ರೀತಿಯಾಗಿ ಮೂರು ಸಲ ಹತ್ತಿ ಇಳಿದು ಮಾಡಿ ಆತನ ದರ್ಶನಮಾಡಿದೆ. ಇಷ್ಟಾದರೂ ಮನಸ್ಸಿಗೆ ತೃಪ್ತಿಯುಂಟಾಗಲಿಲ್ಲ. ಮತ್ತೆ ಮತ್ತ ದರ್ಶನ ಮಾಡಬೇಕು ಅಂತ ಅದು ಹೇಳುತ್ತಲೇ ಇತ್ತು. ಆಗ ಭಾವನೆ ಬಂತು: "ಇದೇ ರೀತಿಯಾಗಿ ಮನಸ್ಸಿನ ಹುಚ್ಚಾಟಿಕೆಯಂತೆ ಹತ್ತಿ ಇಳಿಯುತ್ತಲೇ ಇದ್ದರೆ ಕೊನೆಗೆ ಹುಚ್ಚು ಹಿಡಿದುಬಿಡಬಹುದು." ಕೊನೆಗೆ ಬಹಳ ಪ್ರಯಾಸಪಟ್ಟು ಮನಸ್ಸನ್ನು ಕಲ್ಲಾಗಿಸಿ ಕೈಲಾಸಪತಿಗೆ ನನ್ನ ಕಟ್ಟಕಡೆಯ ಸಾಷ್ಟಾಂಗಪ್ರಣಾಮಮಾಡುತ್ತಿದ್ದ ಹಾಗೇ ಸ್ವಾಮಿ ವಿವೇಕಾನಂದರ ಆ ಉಜ್ಜ್ವಲ ಸಂನ್ಯಾಸಿ ಗೀತೆ ಜ್ಞಾಪಕಕ್ಕೆಬಂದು ಅದು ನನ್ನ ಹೃದಯಕ್ಕೆ ಸಾಕಾದಷ್ಟು ಶಕ್ತಿಯನ್ನು ತುಂಬಿತು. ಸಾಕ್ಷಾತ್ ಕೈಲಾಸಪತಿಯೇ ಅದನ್ನು ನನಗೆ ಉಸುರುತ್ತಿರುವನೊ ಏನೊ ಎಂಬಂತೆ ತೋರಿತು.

**ಸಂನ್ಯಾಸಿ ಗೀತೆ:**

೧

ಏಳು, ಮೇಲೇಳೇಳು ಸಾಧುವೆ, ಹಾಡು ಚಾಗಿಯ ಹಾಡನು;
ಹಾಡಿಸಿಂದೆಚ್ಚರಿಸು ಮಲಗಿಹ ನಮ್ಮ ಈ ತಾಯ್ನಾಡನು!
ದೂರದಡವಿಯೊಳೆಲ್ಲಿ ಲೌಕಿಕವಿಷಯವಾಸನೆ ಮುಟ್ಟದೊ,
ಎಲ್ಲಿ ಗಿರಿಗುಹೆಕಂದರದ ಬಳಿ ಜಗದ ಗಲಿಬಿಲಿ ತಟ್ಟದೊ,
ಎಲ್ಲಿ ಕಾಮವು ಸುಳಿಯದೊ,—ಮೇಣ್
ಎಲ್ಲಿ ಜೀವವು ತಿಳಿಯದೊ
ಕೀರ್ತಿ ಕಾಂಚನವೆಂಬುವಾಸೆಗಳಿಂದ ಜನಿಸುವ ಭ್ರಾಂತಿಯು,
ಎಲ್ಲಿ ಆತ್ಮವು ಪಡೆದು ನಲಿವುದೊ ನಿಚ್ಚವಾಗಿಹ ಶಾಂತಿಯು,
ನನ್ನಿಯರಿವಾನಂದವಾಹಿನಿಯೆಲ್ಲಿ ಸಂತತ ಹರಿವುದೊ,
ಎಲ್ಲಿ ಎಡೆಬಿಡದಿರದ ತೃಪ್ತಿಯ ಸರಿ ನಿರಂತರ ಸುರಿವುದೊ ೧೦

ಅಲ್ಲಿ ಮೂಡಿದ ಹಾಡನುಲಿಯೈ, ವೀರ ಸಂನ್ಯಾಸಿ—
ಓಂ! ತತ್! ಸತ್! ಓಂ!

೨

ಕುಟ್ಟಿ ಪುಡಿಪುಡಿಮಾಡು ಮಾಯೆಯು ಕಟ್ಟಬಿಗಿದಿಹ ಹಗ್ಗವ;
ಕಿತ್ತುಬಿಸುಡೈ ಹೊಳೆವ ಹೊನ್ನಿನ ಹೆಣ್ಣುಮಣ್ಣಿನ ಕಗ್ಗವ!
ಮುದ್ದಿಸಲಿ ಪೀಡಿಸಲಿ ದಾಸನು ದಾಸನೆಂಬುದೆ ಸತ್ಯವು;
ಕಬ್ಬಿಣವೊ? ಕಾಂಚನವೊ? ಕಟ್ಟಿದ ಕಣ್ಣಿ ಕಣ್ಣಿಯೆ ನಿತ್ಯವು.
ಪಾಪ ಪುಣ್ಯಗಳೆಂಬವು,—ಮಾ-
ತ್ಸರ್ಯ ಪ್ರೇಮಗಳೆಂಬವು
ದ್ವಂದ್ವರಾಜ್ಯದ ಧೂರ್ತಚೋರರು; ಬಿಟ್ಟು ಕಳೆ, ಕಳೆಯವರನು!
ಮೋಹಗೊಳಿಪರು, ಬಿಗಿವರಿರಿವರು; ಎಚ್ಚರಿಕೆಯಿಂದವರನು
ತಳ್ಳು ದೂರಕೆ, ಓ ವಿರಕ್ತನೆ! ಹಾಡು ಚಾಗಿಯ ಹಾಡನು! ೨೦
ಹಾಡಿನಿಂದೆಚ್ಚರಿಸು ಮಲಗಿಹ ನಮ್ಮ ಈ ತಾಯ್ನಾಡನು!
ಹಾಡು ಮುಕ್ತಿಯ ಗಾನವನು, ಓ ವೀರ ಸಂನ್ಯಾಸಿ—
ಓಂ! ತತ್! ಸತ್! ಓಂ!

೩

ಕತ್ತಲಳಿಯಲಿ; ಮಬ್ಬುಕವಿಸುವ ಭವದ ತೃಷ್ಣೆಯು ಬತ್ತಲಿ;
ಬಾಳಮೋಹವು ಮರುಮರೀಚಿಕೆ; ಮಾಯೆ ಕೆತ್ತಿದ ಪುತ್ತಳಿ!
ಜನನದೆಡೆಯಿಂ ಮರಣದೆಡೆಗಾಗೆಳೆವುದೆಮ್ಮನು ದೇಹವು;
ಜನ್ಮಜನ್ಮದಿ ಮರಳಿ ಮರಳುವುದೆಮ್ಮ ಬಿಗಿಯಲು ಮೋಹವು!
ತನ್ನ ಜಯಿಸಿದ ಶಕ್ತನು—ಅವ-
ನೆಲ್ಲ ಜಯಿಸಿದ ಮುಕ್ತನು!
ಎಂಬುದನು ತಿಳಿ; ಹಿಂಜರಿಯದಿರು. ಸಂನ್ಯಾಸಿಯೇ, ನಡೆ
ಮುಂದಕೆ.
ಗುರಿಯುದೊರಕುವವರೆಗೆ ನಡೆ, ನಡೆ; ನೋಡದಿರು ನೀ ಹಿಂದಕೆ.
ಏಳು, ಮೇಲೇಳೇಳು ಸಾಧುವೆ, ಹಾಡು ಚಾಗಿಯ ಹಾಡನು;
ಹಾಡಿನಿಂದೆಚ್ಚರಿಸು ಮಲಗಿಹ ನಮ್ಮ ಈ ತಾಯ್ನಾಡನು!
ಹಾಡು ಸಿದ್ಧನೆ, ಓ ಪ್ರಬುದ್ಧನೆ, ಹಾಡು ಸಂನ್ಯಾಸಿ—
ಓಂ! ತತ್! ಸತ್! ಓಂ!

೪

" ಬೆಳೆಯ ಕೊಯ್ವನು ಬಿತ್ತಿದಾತನು ; ಪಾಪ ಪಾಪಕೆ ಕಾರಣ ;
ವೃಕ್ಷಕಾರ್ಯಕೆ ಬೀಜ ಕಾರಣ ; ಪುಣ್ಯ ಪುಣ್ಯಕೆ ಕಾರಣ ;
ಹುಟ್ಟಿ ಮೈವಡೆದಾತ್ಮ ಬಾಳಿನ ಬಲೆಯ ತಪ್ಪದೆ ಹೊರುವುದು ;
ಕಟ್ಟು ಮೀರಿಹನಾವನಿರುವನು ? ಕಟ್ಟು ಕಟ್ಟನೆ ಹೆರುವುದು ! "
ಎಂದು ಪಂಡಿತರೆಂಬರ—ಮೇಣ್
ತತ್ತ್ವದರ್ಶಿಗಳೆಂಬರು !
ಆದೊಡೇನಂತಾತ್ಮವೆಂಬುದು ನಾಮರೂಪಾತೀತವು ; ೪೦
ಮುಕ್ತಿಬಂಧಗಳಿಲ್ಲದಾತ್ಮವು ಸರ್ವನಿಯಮಾತೀತವು !
ತತ್ತ್ವಮಸಿ ಎಂದರಿತು, ಸಾಧುವೆ, ಹಾಡು ಚಾಗಿಯ ಹಾಡನು !
ಹಾಡಿನಿಂದೆಚ್ಚರಿಸು ಮಲಗಿಹ ನಮ್ಮ ಈ ತಾಯ್ನಾಡನು !
ಸಾರು ಸಿದ್ಧನೆ, ವಿಶ್ವವರಿಯಲಿ ! ಹಾಡು ಸಂನ್ಯಾಸಿ—
ಓಂ ! ತತ್ ! ಸತ್ ! ಓಂ !

೫

ತಂದೆತಾಯಿಯು ಸತಿಯು ಮಕ್ಕಳು ಗೆಳೆಯರೆಂಬುವರರಿಯರು ;
ಕನಸು ಕಾಣುತಲವರು ಸೊನ್ನೆಯೆ ಸರ್ವವೆನ್ನುತ ಮೆರೆವರು.
ಲಿಂಗವರಿಯದ ಆತ್ಮವಾರಿಗೆ ಮಗುವು ? ಆರಿಗೆ ತಾತನು ?
ಆರ ಮಿತ್ರನು ? ಆರ ಶತ್ರುವು ? ಒಂದೆಯಾಗಿರುವಾತನು ?
ಆತ್ಮವೆಲ್ಲಿಯು ಇರುವುದು ; —ಮೇಣ್
ಆತ್ಮವೊಂದಾಗಿರುವುದು.
ಭೇದವೆಂಬುವ ತೋರಿಕೆಯು ನಮ್ಮಾತ್ಮನಾಶಕೆ ಹೇತುವು.
ಭೇದವನು ತೊರೆದೊಂದೆಯೆಂಬುದನರಿಯೆ ಮುಕ್ತಿಗೆ ಸೇತುವು.
ಧೈರ್ಯದಿಂದಿದನೆಲ್ಲರಾಲಿಸೆ ಹಾಡು ಚಾಗಿಯ ಹಾಡನು !
ಹಾಡಿನಿಂದೆಚ್ಚರಿಸು ಮಲಗಿಹ ನಮ್ಮ ಈ ತಾಯ್ನಾಡನು !
ಸಾರು, ಜೀವನ್ಮುಕ್ತ ! ಸಾರ್ವೆ ಧೀರಸಂನ್ಯಾಸಿ—
ಓಂ ! ತತ್ ! ಸತ್ ! ಓಂ !

೬

ಇರುವುದೊಂದೇ ! ನಿತ್ಯಮುಕ್ತನು, ಸರ್ವಜ್ಞಾನಿಯು ಆತ್ಮನು !
ನಾಮರೂಪಾತೀತನಾತನು ; ಪಾಪಪುಣ್ಯಾತೀತನು !

ವಿಶ್ವಮಾಯಾಧೀಶನಾತನು ; ಕನಸು ಕಾಣುವನಾತನು !
ಸಾಕ್ಷಿಯಾತನು ; ಪ್ರಕೃತಿಜೀವರ ತೆರದಿ ತೋರುವನಾತನು !
ಎಲ್ಲಿ ಮುಕ್ತಿಯ ಹುಡುಕುವೆ ?—ಏ- ೬೦
ಕಿಂತು ಸುಮ್ಮನೆ ದುಡುಕುವೆ ?
ಇಹವು ತೋರದು, ಪರವು ತೋರದು, ಗುಡಿಯೊಳದು
ಮೈದೋರದು.
ವೇದ ತೋರದು, ಶಾಸ್ತ್ರ ತೋರದು ; ಮತವು ಮುಕ್ತಿಯ ತೋರದು!
ನಿನ್ನ ಕೈಲಿದೆ ನಿನ್ನ ಬಿಗಿದಿಹ ಕಬ್ಬಿಣದ ಯಮಪಾಶವು;
ಬರಿದೆ ಶೋಕಿಪುದೇಕೆ ? ಬಿಡು, ಬಿಡು ! ನಿನಗೆ ನೀನೇ ಮೋಸವು !
ಬೇಡ, ಪಾಶವ ಕಡಿದು ಕೈಬಿಡು ! ಹಾಡು ಸಂನ್ಯಾಸಿ—
ಓಂ ! ತತ್ ! ಸತ್ ! ಓಂ !

೭

" ಶಾಂತಿ ಸರ್ವರಿಗಿರಲಿ " ಉಲಿಯೈ, " ಜೀವಜಂತುಗಳಾಳಿಗೆ
ಹಿಂಸೆಯಾಗದೆ ಇರಲಿ ನನ್ನಿಂದೆಲ್ಲ ಸೊಗದಲಿ ಬಾಳುಗೆ !
ಬಾನೊಳಾಡುವ, ನೆಲದೊಳೋಡುವ ಸರ್ವರಾತ್ಮನು ನಾನಹೆ ;
ನಾಕ ನರಕಗಳಾಸೆಭಯಗಳನೆಲ್ಲ ಮನದಿಂ ದೂಡುವೆ ! " ೭೦
ದೇಹ ಬಾಳಲಿ, ಬೀಳಲಿ ;—ಅದು
ಕರ್ಮನದಿಯಲಿ ತೇಲಲಿ !
ಕೆಲರು ಹಾರಗಳಿಂದ ಸಿಂಗರಿಸದನು ಪೂಜಿಸಿ ಬಾಗಲಿ !
ಕೆಲರು ಕಾಲಿಂದೊದೆದು ನೂಕಲಿ ! ಹುಡಿಯು ಹುಡಿಯೊಳ
ಹೋಗಲಿ !
ಎಲ್ಲ ಒಂದಿರಲಾರು ಹೊಗಳುವರಾರು ಹೊಗಳಿಸಿಕೊಂಬರು ?
ನಿಂದೆ ನಿಂದಿಪರೆಲ್ಲ ಕೂಡಲು ಯಾರು ನಿಂದೆಯನುಂಬರು ?
ಪಾಶಗಳ ಕಡಿ ! ಬಿಸುಡು ಕಿತ್ತಡಿ ! ಹಾಡು ಸಂನ್ಯಾಸಿ—
ಓಂ ! ತತ್ ! ಸತ್ ! ಓಂ !

೮

ಎಲ್ಲಿ ಕಾಮಿನಿಯೆಲ್ಲಿ ಕಾಂಚನದಾಸೆ ನೆಲೆಯಾಗಿರುವುದೊ,
ಸತ್ಯವೆಂಬುವುದಲ್ಲಿ ಸುಳಿಯದು ! ಎಲ್ಲಿ ಕಾಮವು ಇರುವುದೊ,

ಅಲ್ಲಿ ಮುಕ್ತಿಯು ನಾಚಿ ತೋರದು ! ಎಲ್ಲಿ ಸುಳಿವುದೊ ಭೋಗವು
ಅಲ್ಲಿ ತೆರೆಯದು ಮಾಯೆ ಬಾಗಿಲಿನಲ್ಲಿಹುದು ಭವರೋಗವು ;
ಎಲ್ಲಿ ನೆಲಸದೊ ಚಾಗವು— ದಿಟ-
ವಲ್ಲಿ ಸೇರದು ಯೋಗವು !
ಗಗನವೇ ಮನೆ ! ಹಸುರೆ ಹಾಸಿಗೆ! ಮನೆಯು ಸಾಲ್ವುದೆ ಚಾಗಿಗೆ?
ಹಸಿಯೊ, ಬಿಸಿಯೋ ? ಬಿದಿಯು ಕೊಟ್ಟಾಹಾರವನ್ನವು ಯೋಗಿಗೆ !
ಏನು ತಿಂದರೆ, ಏನು ಕುಡಿದರೆ, ಏನು ? ಆತ್ಮಗೆ ಕೊರತೆಯೆ ?
ಸರ್ವಪಾಪವ ತಿಂದುತೇಗುವ ಗಂಗೆಗೇಂ ಕೊಳೆ ಕೊರತೆಯೆ ?
ನೀನು ಮಿಂಚೈ ! ನೀನು ಸಿಡಿಲೈ ! ಮೊಳಗು ಸಂನ್ಯಾಸಿ—
ಓಂ ! ತತ್ ! ಸತ್ ! ಓಂ

೯

ನಿಜವನರಿತವರೆಲ್ಲೊ ಕೆಲವರು ; ನಗುವರುಳಿದವರೆಲ್ಲರೂ
ನಿನ್ನ ಕಂಡರೆ, ಹೇ ಮಹಾತ್ಮನೆ ! ಕುರುಡರೇನನು ಬಲ್ಲರು ? ೯೦
ಗಣಿಸವವರನು ಹೋಗು, ಮುಕ್ತನೆ, ನೀನು ಊರಿಂದೂರಿಗೆ
ಸೊಗವ ಬಯಸದೆ, ಅಳಲಿಗಳುಕದೆ ! ಕತ್ತಲಲಿ ಸಂಚಾರಿಗೆ
ನಿನ್ನ ಬೆಳಕನು ನೀಡೆಲೈ ;—ಸಂ-
ಸಾರ ಮಾಯೆಯ ದೂಡೆಲೈ !
ಇಂತು ದಿನದಿನ ಕರ್ಮಶಕ್ತಿಯು ಮುಗಿವವರೆಗೂ ಸಾಗೆಲೈ !
ನಾನು ನೀನುಗಳಳಿದು ಆತ್ಮದೊಳಿಳಿದು ಕಡೆಯೊಳು ಹೋಗೆಲೈ !
ಏಳು, ಮೇಲೇಳೇಳು ಸಾಧುವೆ, ಹಾಡು ಚಾಗಿಯ ಹಾಡನು !
ಹಾಡಿನಿಂದೆಚ್ಚರಿಸು ಮಲಗಿಹ ನಮ್ಮ ಈ ತಾಯ್ನಾಡನು !
ತತ್ತ್ವಮಸಿ ಎಂದರಿತು ಹಾಡೈ, ಧೀರಸಂನ್ಯಾಸಿ—
ಓಂ ! ತತ್ ! ಸತ್ ! ಓಂ !*

ಬಳಿಕ ಮೇಲಕ್ಕೆ ಎದ್ದು ಮತ್ತೊಮ್ಮೆ ಕೈಲಾಸಪತಿಯನ್ನು ಕಣ್ಣು ತುಂಬ ನೋಡಿ ಆತನ ಅಸದೃಶ ರೂಪವನ್ನು ನೆನಸಿಕೊಳ್ಳುತ್ತಲೇ ತಿಟ್ಟಿನಿಂದ ಕೆಳಕ್ಕೆ ಇಳಿದೆ. ಕ್ರಮೇಣ ಮುಂದುವರಿದು ನೇಕಾಂಗನ್ನು ತಲುಪಿದೆ.

---

* ಶ್ರೀ ಕುವೆಂಪು ಅವರ ಅನುವಾದ

## ಸೇಕಾಂಗಿನಿಂದ ತಾಕ್ಲ ಕೋಟೆಗೆ

ಪ್ರಾತಃಕಾಲ ೬-೩೦ ರಿಂದ ಅಪರಾಹ್ಣ ೨-೪೫ ರ ವರೆಗೆ.

ತಾ|| ೧೧-೭-'೫೧, ಬುಧವಾರ.

ಇಂದು ಬೆಳಗ್ಗೆ ಹೊತ್ತಿಗೆ ಮುಂಚೆಯೇ ಎದ್ದು ಬಂದ ದಾರಿಯಲ್ಲೇ ಹಿಂದಿರುಗಿ ತಾಕ್ಲ ಕೋಟೆಯನ್ನು ತಲುಪಿ ಮೋಹನಸಿಂಗನ ಅಂಗಡಿಯಲ್ಲೇ ಇಳಿದುಕೊಂಡೆವು. ನಾವು ಸುರಕ್ಷಿತವಾಗಿ ಹಿಂದಿರುಗಿ ಬಂದುದಕ್ಕಾಗಿ ಮೋಹನಸಿಂಗನಿಗೆ ಬಹಳ ಆನಂದವಾಗಿಬಿಟ್ಟಿತು.

## ತಾಕ್ಲ ಕೋಟೆಯಿಂದ ಆಸ್ಕೋಟೆಗೆ.

ನಾವು ತಾಕ್ಲಕೋಟೆಯನ್ನು ತಾ|| ೧೨-೭-೧೯೫೧, ಗುರುವಾರ ಬಿಟ್ಟು ಪ್ಯಾಲ, ಕಾಳಾಪಾನಿ, ಮಾಲ್ಪ, ಜಿಪ್ತಿ, ಸಿರ್ಖಾ, ಖೇಲ, ಧಾರ್ಚುಲ, ಕುಚಿಯ ಇವುಗಳಲ್ಲೆಲ್ಲಾ ಒಂದೊಂದು ರಾತ್ರಿ, ಗರ್ಭಿಯಾಂಗಿನಲ್ಲಿ ಮಾತ್ರ ಎರಡು ರಾತ್ರಿ ತಂಗಿದ್ದು ಆಸ್ಕೋಟನ್ನು ತಾ|| ೨೨-೭-೧೯೫೧, ಭಾನು ವಾರ ತಲುಪಿದೆವು.

ನಾವು ತಾಕ್ಲಕೋಟೆಯನ್ನು ಮಧ್ಯಾಹ್ನ ೧೨-೪೫ ಕ್ಕೆ ಬಿಟ್ಟು ಪ್ಯಾಲ ತಲುಪುವುದರಲ್ಲಿ ಸಾಯಂಕಾಲ ಐದಾಗಿಬಿಟ್ಟಿತು. ನಡು ದಾರಿ ಯಲ್ಲಿ ಚೀಣೀಯರು ನಮ್ಮ ಹಾಸಿಗೆ ಬಟ್ಟೆ ಬರೆ ಎಲ್ಲವನ್ನೂ ಶೋಧಿಸಿ ಮುಂದಕ್ಕೆ ಬಿಟ್ಟುಕೊಟ್ಟರು. ಆಗ ನಮ್ಮ ಪಾರ್ಟಿಯವರು ಹೆದರಿದ್ದರು : “ ನಮ್ಮ ಕ್ಯಾಮರಾಗಳು, ಫಿಲ್ಮ್‌ಗಳು, ಬಂದೂಕ ಇವುಗಳ ಗತಿ ಏನಾಗು ವುದೊ ? ಅವು ಹಿಂದಿರುಗಿ ನಮ್ಮ ಕೈಗೆ ಬರುವುವೊ ಇಲ್ಲವೊ ? ” ಎಂಬು ದಾಗಿ. ಆದರೆ ಭಗವಂತನ ಕೃಪೆಯಿಂದ ಅವೊಂದೂ ಅವರ ಕಣ್ಣಿಗೆ ಬೀಳದ ರೀತಿಯಲ್ಲಿ ಶೋಧನೆ ನಡೆದುಹೋಯಿತು. ಇಲ್ಲಿಂದ ನೇರವಾಗಿ ನೇಪಾಳಕ್ಕೆ ಮುಂದುವರಿದು ಪಶುಪತಿನಾಥನನ್ನು ನೋಡಿ ಅಲ್ಲಿಂದ ಭಾರತಕ್ಕೆ ಹಿಂದಿರುಗಲು ಮಾರ್ಗ ಇರುವುದಂತೆ. ಮನಸ್ಸಿಗೇನೊ ಇಚ್ಛೆ, ಆದರೆ ದೇಹಕ್ಕೆ ಸಾಕಾಗಿಹೋಗಿತ್ತು. “ ಭಗವಂತನ ಕೃಪೆಯಿದ್ದರೆ ಮುಂದೆ ನೋಡೋಣ ” ಎಂದು ಭಾವಿಸಿ ಬಂದ ದಾರಿಯಲ್ಲೇ ಹಿಂದಿರುಗ ಲಾರಂಭಿಸಿದೆವು.

ಮಾರನೆ ದಿನ ಲಿಪುಲೇಖ್ ಕಣಿವೆಯ ಹತ್ತಿರ ಬಂದಾಗ ನೋಡು ತ್ತೇವೆ, ಹಿಮ ಅಲ್ಲಿನ ಬೆಟ್ಟಗಳ ತುದಿಯಲ್ಲಿ ಮಾತ್ರ ಇನ್ನೂ ಕಟ್ಟಿಕೊಂಡಿ

ದೆಯೇ ವಿನಾ ತಪ್ಪಲಿನಲ್ಲೆಲ್ಲಾ ಬಹುಮಟ್ಟಿಗೆ ಕರಗೇಹೋಗಿದೆ! ಇಂದಿನ ದಾರಿಯಲ್ಲೆಲ್ಲಾ ಬಹುಶಃ ನಾವು ಕೇವಲ ಎರಡು ಫರ್ಲಾಂಗು ದೂರ ಹಿಮದಮೇಲೆ ನಡೆಯಬೇಕಾಗಿ ಬಂದಿರಬಹುದು. ನಾವು ಇದೇ ಸ್ಥಳದಲ್ಲಿ ಹಿಂದೆ ಕಂಡ ಆ ಭೀಮಾಕಾರದ ಹಿಮರಾಶಿ ಮಂಗರಮಾಯವಾಗಿಬಿಟ್ಟದೆ. ಅಂದಿನ ಯಾವ ಕಷ್ಟವನ್ನೂ ಅನುಭವಿಸದೆ ಇಂದು ಬೆಳಗಿನ ಒಂಬತ್ತು ಘಂಟೆ ಸಮಯಕ್ಕೆ ಲಿಪುಲೇಖ್ ಕಣಿವೆಯ ತುದಿಯನ್ನು ಮುಟ್ಟದೆವು. ಅಲ್ಲಿ ಕುಳಿತು ಹಿಂದಿನ ಸಲ ಅದೇ ಜಾಗದಲ್ಲಿ ಕಂಡುಬಂದ ದೃಶ್ಯಗಳನ್ನೆಲ್ಲಾ ಮತ್ತೆ ನೆನಸಿಕೊಂಡು ಸ್ವಲ್ಪ ಹೊತ್ತು ವಿಶ್ರಮಿಸಿಕೊಂಡೆವು. ಬಳಿಕ ಪುಣ್ಯ ಭೂಮಿ ಭಾರತದ ಎಲ್ಲೆಗೆ ಕಾಲಿಟ್ಟು ಸಿಯಾಂಗ್ಚಮ್ಮನ್ನು ಹತ್ತೂವರೆಯ ಹೊತ್ತಿಗೆ ತಲುಪಿದೆವು. ನಮ್ಮ ಯಾತ್ರೆ ಪೂರ್ಣವಾಗಿ ಸಫಲಗೊಂಡಿದುದ ಕ್ಕಾಗಿಯೂ ಮತ್ತು ಮರಳಿ ಭಾರತದ ಎಲ್ಲೆಗೆ ಹಿಂದಿರುಗಿದುದಕ್ಕಾಗಿಯೂ ನಮ್ಮ ಹೃದಯದ ಆನಂದ ಸೂಚಿಸಲು ನಮ್ಮ ಬಂದೂಕಿನಿಂದ ಕೆಲವು ಕುಶಾಲು ಮದ್ದುಗಳನ್ನು ಹಾರಿಸಿದೆವು. ಬಳಿಕ ಎಲ್ಲರೂ ಆನಂದದಿಂದ ಕುಪ್ಪಳಿಸಿ ಜಯಘೋಷಗಳನ್ನು ಮಾಡಿದೆವು. ಅನಂತರ ಮುಂದು ವರಿದು ಕಾಳಾಪಾನಿಯನ್ನು ತಲುಪಿದೆವು. ಅಲ್ಲಿ ರಾತ್ರಿಯೆಲ್ಲಾ ಮಳೆ ಬಿತ್ತು.

ಕಾಳಾಪಾನಿಯನ್ನು ಮಾರನೆ ದಿನ ಬೆಳಗ್ಗೆ ಬಿಟ್ಟು ಅಪರಾಹ್ಣ ಗರ್ಭಿಯಾಂಗನ್ನು ತಲುಪಿದೆವು.

ನಾವು ಮಾಲ್ಪಕ್ಕೆ ಬಂದಾಗ ಇಡೀ ರಾತ್ರಿಯೆಲ್ಲಾ ಮಳೆ ಸುರಿಯಿತು. ನಾವು ಯಾವ ಮಳೆಗಾಗಿ ಹೆದರಿದ್ದೆವೊ, ಆ ಮಳೆ ನಾನು ಕಾಲಿಡುತ್ತಿದೇನೆ ಎಂಬುದಾಗಿ ಮುನ್ಸೂಚನೆ ಕೊಡುತ್ತಿರುವಂತೆ ಧಾರಾ ಕಾರವಾಗಿ ಸುರಿಯಿತು. ಆದರೆ ಭಗವಂತನ ಕೃಪೆಯಿಂದ ಮಾರನೆ ದಿನ ನಾವು ಹೊರಡುವ ಸಮಯಕ್ಕೆ ಸರಿಯಾಗಿ ಮಳೆ ನಿಂತುಹೋಯಿತು.

ನಾವು ಸಿರ್ಖಾಕ್ಕೆ ಬಂದಾಗ ಅಲ್ಲಿನ ನೊಣಗಳು ವರ್ಣಿಸಲಸದಳವಾದ ಸುಸ್ವಾಗತವನ್ನಿತ್ತುವು. ಯಾವ ದಯದಾಕ್ಷಿಣ್ಯವೂ ಇಲ್ಲದೆ, ಇದು ಕಣ್ಣು ಅದು ಮೂಗು ಎಂಬ ಭೇದಭಾವನೆಯನ್ನೇ ಮಾಡದೆ ಸುಮ್ಮನೆ ಮುತ್ತು ತ್ತಲೇ ಇದ್ದುವು. ಊಟಮಾಡುವಾಗಲಂತೂ ಅವು ನಮ್ಮ ಹೊಟ್ಟೆಗೆ ಹೋಗದೆ ಇರಲಿ ಎಂದು ನಾವು ಎಷ್ಟು ಕಷ್ಟ ತೆಗೆದುಕೊಂಡೆವೊ ಅದು

ವರ್ಣನಾತೀತವಾದ್ದು! ಅಂದಿನ ರಾತ್ರಿ ಮಲಗಿ ಬೆಳಗ್ಗೆ ಏಳುವುದರಲ್ಲಿ ಲಕ್ಷಾಂತರ ನೊಣಗಳು ನಮ್ಮ ಹೊದ್ದಿಕೆಯ ಮೇಲೆ, ಮಗ್ಗುಲಲ್ಲಿ, ಅಕ್ಕ ಪಕ್ಕದಲ್ಲಿ ಸತ್ತುಬಿದ್ದಿದ್ದುವು. "ಈ ಜಾಗವನ್ನು ಎಷ್ಟು ಹೊತ್ತಿಗೆ ಬಿಟ್ಟೇವು" ಎಂದು ನಿಮಿಷಗಳನ್ನು ಎಣಿಸುತ್ತಲೇ ಇದ್ದು ಆ ಜಾಗವನ್ನು ಬಿಟ್ಟೆವು.

ನಾವು ಧಾರ್ಚುಲವನ್ನು ತಲುಪಿದ ದಿನವೂ ಅಂದಿನ ರಾತ್ರಿ ಅಲ್ಲಿ ಒಳ್ಳೆ ಮಳೆ ಆಯಿತು. ಅಲ್ಲಿನ ಪ್ರವಾಸಿ ಮಂದಿರ ಬಹಳ ಚಿಕ್ಕದಾಗಿದ್ದುದರಿಂದ ನಾನು ಹೊರಗಡೆ ಟೆಂಟು ಕಟ್ಟಿ ಮಲಗಿಕೊಂಡಿದ್ದೆ. ಮಳೆ ರಾತ್ರಿ ಎರಡು ಘಂಟೆ ಸಮಯಕ್ಕೆ ಬಹಳ ಜೋರಾಗಿ ಹೊಯ್ಯಲು ಆರಂಭಿಸಿ ಬಿಟ್ಟಿತು. ಹಾಸಿಗೆ ಒಟ್ಟೆಬರೆ ಎಲ್ಲವನ್ನು ಪ್ರವಾಸಿ ಮಂದಿರಕ್ಕೆ ತೆಗೆದು ಕೊಂಡು ಹೋಗಿ ಉಳಿದ ರಾತ್ರಿಯನ್ನು ಜಾಗರಣೆಮಾಡಿ ಕಳೆಯ ಬೇಕಾಯಿತು.

ನಾವು ಕುಚಿಯ ತಲುಪುವುದರಲ್ಲಿ ನಾವು ಹೆದರಿದ್ದ ಮುಂಗಾರು ಮಳೆ ಕಾಲು ಹಾಕಿಯೇಬಿಟ್ಟು ಬಿಡುವೇಕೊಡದೆ ಸುಮ್ಮನೆ ಸುರಿಯ ಲಾರಂಭಿಸಿಬಿಟ್ಟಿತು. ಆ ಮಳೆಯಲ್ಲೇ ಮುಂದುವರಿದು ಆಸ್ಕೋಟನ್ನು ತಲುಪಿದೆವು.

ನಾನು ಹಿಂದೆಯೇ ನಮ್ಮ ಪಾರ್ಟಿಯವರಿಗೆ ತಿಳಿಸಿದ್ದೆ: "ನನಗೆ ನಮ್ಮ ಮಾಯಾವತಿ ಆಶ್ರಮವನ್ನು ನೋಡಬೇಕೆಂಬ ಆಸೆ ಇದೆ. ಆಸ್ಕೋಟಿನಿಂದ ಅಲ್ಲಿಗೆ ದಾರಿ ಇದೆ. ಯಾತ್ರೆಯಿಂದ ಹಿಂದಿರುಗಿ ಬರುವಾಗ ಆಸ್ಕೋಟನಲ್ಲಿ ನಿಮ್ಮಿಂದ ಬೀಳ್ಕೊಂಡು ಮಾಯಾವತಿಯ ಕಡೆ ಮುಂದುವರಿಯಬೇಕಾಗುತ್ತದೆ" ಎಂಬುದಾಗಿ. ಅದಕ್ಕೆ ಅವರು ಮನಸ್ಸಿಲ್ಲದ ಮನಸ್ಸಿನಿಂದ ಒಪ್ಪಿದ್ದರು. ಮಾರನೆ ದಿನ ಬೆಳಗ್ಗೆ ನಾಲ್ಕು ಘಂಟೆಗೇ ಎದ್ದು ಒಬ್ಬ ಕೂಲಿಯವನನ್ನು ಜೊತೆಯಲ್ಲಿ ಕರೆದುಕೊಂಡು ನಮ್ಮ ಪಾರ್ಟಿಯವರಿಂದ ಬೀಳ್ಕೊಂಡು ಮಾಯಾವತಿಯ ಕಡೆಗೆ ಮುಂದುವರಿದೆ. ನಮ್ಮ ಪಾರ್ಟಿಯವರು ಆಲ್ಮೋರದ ಕಡೆಗೆ ಮುಂದುವರಿದರು.

## ಆಸ್ಕೋಟಿನಿಂದ ಪಿಠೋರಘರಕ್ಕೆ

**೫,೦೦೦ ಅಡಿ ಎತ್ತರದಿಂದ ಅಷ್ಟೇ ಎತ್ತರಕ್ಕೆ. ದೂರ ೩೫ ಮೈಲಿ.**
**ಪ್ರಯಾಣ ಬೆಳಗಿನ ಜಾವ ೪–೩೦ ರಿಂದ ಸಾಯಂಕಾಲ ೬ ರ ವರೆಗೆ,**
**ತಾ|| ೨೪–೭–'೫೧ ಸೋಮವಾರ,**

ಇಂದಿನ ದಾರಿ ದಟ್ಟವಾಗಿ ಬೆಳೆದಿರುವ ದೇವದಾರು (ಶಂಕು ವೃಕ್ಷ) ವೃಕ್ಷಗಳ ಕಾಡಿನ ಮೂಲಕ ಮುಂದುವರಿಯಿತು. ಉದ್ದಕ್ಕೂ ಬಹಳ ಸುಂದರವಾದ ದೃಶ್ಯ. ದಾರಿಯ ಉದ್ದಕ್ಕೂ ಮುಂಗಾರು ಮಳೆ ಸುಮ್ಮನೆ ಸುರಿಯುತ್ತಲೇ ಇತ್ತು. ದಾರಿಯಲ್ಲಿ ಯಾವ ಅಂಗಡಿಯೇ ಆಗಲಿ ಮುಂಗಟ್ಟೇ ಆಗಲಿ ದೊರೆಯದೆ ಹಸಿದೇ ಮುಂದುವರಿಯಬೇಕಾಯಿತು. ಹಾಗೇ ಮುಂದುವರಿದು ಕೊನೆಗೆ ಪಿಠೋರಘರದ ಹತ್ತಿರಕ್ಕೆ ಬಂದೆವು.

ಈ ಪುಟ್ಟ ನಗರ ಬಹಳ ಸುಂದರವಾದ ಜಾಗದಲ್ಲಿದೆ. ಇದರ ಸುತ್ತಲೂ ವಿಶಾಲವಾದ ಗದ್ದೆ ಬಯಲು. ಅದು ಸುಮ್ಮನೆ ಹಸುರೇ ಹಸುರಾಗಿ ಕಂಡಿತು. ಇಲ್ಲಿ ಎಲ್ಲಾ ವಿಧವಾದ ಸಾಮಾನು ಸರಂಜಾಮುಗಳೂ ದೊರೆಯುತ್ತವೆ. ತಣಕಪುರದಿಂದ ಇಲ್ಲಿಯವರೆಗೆ ಬಸ್ಸು ರಸ್ತೆ ಮಾಡಿದಾರೆ. ಆದರೆ ಇಲ್ಲಿಂದ ಹದಿನಾಲ್ಕು ಮೈಲಿ ದೂರದಲ್ಲಿ ಹರಿಯುವ ಸರಯೂ ನದಿಯ ಮೇಲೆ ಹಾಕಿದ್ದ ಬಸ್ಸಿನ ಸೇತುವೆ ಮುರಿದುಬಿದ್ದು ಇಲ್ಲಿಂದ ಹೊರಟ ಬಸ್ಸು ನೇರವಾಗಿ ತಣಕಪುರಕ್ಕೆ ಹೋಗುತ್ತಿರಲಿಲ್ಲ. ಆದ್ದರಿಂದ ಜನರು ಇಲ್ಲಿಂದ ಸರಯೂ ನದಿಯವರೆಗೆ ಬಸ್ಸಿನಲ್ಲಿ ಹೋಗಿ ಬಳಿಕ ನದಿ ದಾಟಿ ಆ ಕಡೆ ಕಾದುಕೊಂಡಿರುತ್ತಿದ್ದ ಬಸ್ಸನ್ನು ಹತ್ತಿ ಮುಂದಕ್ಕೆ ಪ್ರಯಾಣ ಬೆಳೆಸುತ್ತಿದ್ದರು. ಆದರೆ ಈಗ ಕೆಲವು ದಿವಸಗಳಿಂದ ಸರಯೂ ನದಿಯಿಂದ ಲೋಹಘಾಟಿನವರೆಗೆ ಓಡುತ್ತಿದ್ದ ಬಸ್ಸು ಏನೇನೊ ಕಾರಣಗಳಿಂದ ಸರಿಯಾಗಿ ಓಡುತ್ತಿರಲಿಲ್ಲ. ಒಂದೊಂದು ದಿನ ಅದು ಸರಯೂ ನದಿ ಹತ್ತಿರಕ್ಕೆ ಬರುತ್ತಲೇ ಇರಲಿಲ್ಲವಂತೆ. ಬಸ್ಸು ಸಂಚಾರ ಈ ಹೊಸ ರಸ್ತೆಯಲ್ಲಿ ಇನ್ನೂ ಒಂದು ಸ್ಥಿರತೆಯಿಂದ ನಡೆಯುತ್ತಿರಲಿಲ್ಲ. ಹೊರಟ ದಿನ ಹೊರಟಿತು ಇಲ್ಲದಿದ್ದರೆ ಇಲ್ಲವೇ ಇಲ್ಲ. ಹೀಗಿತ್ತು ಪರಿಸ್ಥಿತಿ. ಸರಯೂ ನದಿಯಿಂದ ಲೋಹಘಾಟಿಗೆ ಬಸ್ಸು ಸಿಕ್ಕಲಿ ಬಿಡಲಿ, ಇಲ್ಲಿಂದ ಸರಯೂ ನದಿಯವರೆಗೆ ಬಸ್ಸು ಸಿಕ್ಕುತ್ತದೆ ಎಂಬುದನ್ನು ಕೇಳಿ ಬಹಳ ಆನಂದ ಆಗಿಬಿಟ್ಟಿತು. ಈಗ ಸುಮಾರು ಎರಡು ತಿಂಗಳಿಂದ ನಡೆದು ನಡೆದು ಬಹಳವಾಗಿ ಸಾಕಾಗಿ ಹೋಗಿತ್ತು.

ಇಂದಿನ ರಾತ್ರಿ ಇಲ್ಲಿ ನಮ್ಮ ಮಿಷನ್ನಿಗೆ ಪರಿಚಯವಿದ್ದ ಒಬ್ಬ ವಕೀಲರ ಮನೆಯಲ್ಲಿ ಇಳಿದುಕೊಂಡೆ. ಅವರು ನಾನು ಕೈಲಾಸ-ಮಾನಸ ಸರೋವರ ಯಾತ್ರೆ ಮುಗಿಸಿ ಬಂದಿರುವುದನ್ನು ನೋಡಿ ಬಹಳ ಆನಂದ

ಪಟ್ಟು ಬಗೆ ಬಗೆಯ ತಿಂಡಿ ತೀರ್ಥಗಳನ್ನು ಮಾಡಿಸಿ ಊಟಕ್ಕೆ ಬಡಿಸಿದರು. ಈಗ ಎರಡು ತಿಂಗಳಿಂದ ಸರಿಯಾದ ಆಹಾರವಿಲ್ಲದೆ ದೇಹ ಕಂಗೆಟ್ಟಿತ್ತು. ಬಾಯಿ ಸಪ್ಪೆಯಾಗಿತ್ತು. ಜೊತೆಗೆ ಇಂದಿನ ದಿನ ಬಹಳವಾಗಿ ಹಸಿದೂ ಬಂದಿದ್ದೆ. ಇಂದು ಮಧ್ಯ ದಾರಿಯಲ್ಲಿ ತಂಗಲು ಬೇರೆ ಉತ್ತಮ ಸ್ಥಳ ವಿಲ್ಲದುದರಿಂದ ಒಂದೇ ಸಮನೆ ಇಪ್ಪತ್ತಾರು ಮೈಲಿಯನ್ನು ನಡೆದೂಬಿಟ್ಟಿದ್ದೆ. ಈ ಎಲ್ಲಾ ಕಾರಣಗಳಿಂದ ಇಂದಿನ ಆಹಾರ ಅಮೃತದೋಪಾದಿಯಲ್ಲೇ ಕಂಡಿತು. ವಕೀಲರ ಮನೆಯವರೆಲ್ಲರೂ ಒಳ್ಳೆ ಗುಣಶಾಲಿಗಳು ಮತ್ತು ಭಗವದ್ಭಕ್ತರು. ಬಹಳ ಆನಂದದಿಂದ ಇಂದಿನ ರಾತ್ರಿಯನ್ನು ಅವರೊಡನೆ ಕಳೆದೆ.

## ಪಿಥೋರಘಢದಿಂದ ಲೋಹಘಾಟಿಗೆ

**೫,೦೦೦ ಅಡಿ ಎತ್ತರದಿಂದ ೬,೦೦೦ ಅಡಿಯಷ್ಟು ಎತ್ತರಕ್ಕೆ. ದೂರ ೨೭ ಮೈಲಿ.**

**ಪ್ರಯಾಣ ಬೆಳಗಿನ ೭-೩೦ ರಿಂದ ರಾತ್ರಿ ೭ ರ ವರೆಗೆ.**

**ತಾ|| ೨೪-೭-'೫೧, ಮಂಗಳವಾರ.**

ಪಿಥೋರಘಢದಿಂದ ಸುಮಾರು ಹದಿನಾಲ್ಕು ಮೈಲಿ ದೂರದವರೆಗೆ ಬಸ್ಸು ಸಿಕ್ಕಿತು. ನನ್ನ ಕೂಲಿಯವನನ್ನೂ ಬಸ್ಸಿನಲ್ಲೇ ಕರೆದುಕೊಂಡು ಹೋದೆ. ಅಲ್ಲಿಂದಿಳಿದು ಸರಯೂ ನದಿಯ ಸೇತುವೆಯ ಹತ್ತಿರಕ್ಕೆ ಬರುವುದ ರಲ್ಲಿ ಸಮಯ ೯-೩೦ ಆಯಿತು. ಅಲ್ಲಿನ ಜನರು ಹೇಳಿದರು: "ಇನ್ನೂ ಕೆಲವು ದಿವಸದವರೆಗೆ ಲೋಹಘಾಟಿನ ಬಸ್ಸು ಇಲ್ಲಿಗೆ ಬರುವಹಾಗಿಲ್ಲ" ಎಂಬುದಾಗಿ. ನಾವಿನ್ನೂ ಹದಿಮೂರು ಮೈಲಿ ನಡೆಯಬೇಕಾಗಿತ್ತು. ಹತ್ತಿರವೇ ಇದ್ದ ಟೀ ಅಂಗಡಿಗೆ ಹೋಗಿ ವಕೀಲರ ಮನೆಯವರು ಕಟ್ಟಿ ಕೊಟ್ಟಿದ್ದ ಬುತ್ತಿಯನ್ನು ತೆರೆದೆ. ಅವರು ನಿನ್ನೆಯೇ ಏನೇನೊ ಸಿಹಿ ತಿಂಡಿಗಳನ್ನು ಹೋಟೆಲಿನಿಂದ ತರಿಸಿ ತಮ್ಮ ಅಡಿಗೆಯವನಿಗೆ ಹೇಳಿದ್ದರು: "ನೀನು ಬೆಳಗ್ಗೆ ಎದ್ದು ಬಿಸಿ ಬಿಸಿಯಾಗಿ ಚಪಾತಿ ಮಾಡಿ ಈ ತಿಂಡಿಗಳನ್ನು ಅದರ ಜೊತೆಯಲ್ಲಿ ಇಟ್ಟು ಸ್ವಾಮಿಗಳ ಪ್ರಯಾಣಕ್ಕೆ ಬುತ್ತಿಯನ್ನು ಕಟ್ಟಿಕೊಡು" ಎಂಬುದಾಗಿ. ಆ ಸಿಹಿ ತಿಂಡಿಗಳು ಏನೇನು ಎಂಬುದನ್ನು ನಾನೂ ನೋಡಿದ್ದೆ—ಲಾಡು, ಜಿಲೇಬಿ, ಮೈಸೂರ್ ಪಾಕ್, ಇತ್ಯಾದಿ. ಆ ಬುತ್ತಿಯನ್ನು ಬಿಚ್ಚಲು ಶುರುಮಾಡಿದ ಒಡನೇ ಬಾಯಿಂದ ನೀರು

ಸುಮ್ಮನೆ ಊರಲಾರಂಭಿಸಿತು. ಮನಸ್ಸು ಭಾವಿಸಿಕೊಂಡಿತ್ತು: "ಇಂದು ಒಳ್ಳೆ ಟಿಫಿನ್ನು" ಎಂಬುದಾಗಿ. ಆದರೆ ಬುತ್ತಿ ಬಿಚ್ಚಿ ನೋಡುತ್ತಲೆ, ಎದೆ ಒಡೆದೇ ಹೋಯಿತು. ಆದರಲ್ಲಿ ಕೇವಲ ಸಾಕಾದಷ್ಟು ಚಪಾತಿ ಮಾತ್ರ ಇದ್ದುವು, ಹೋಗಲಿ, ಒಂದು ಚಮಚ ಸಕ್ಕರೆ ಅಥವಾ ಒಂದು ಚಿಟಿಕೆ ಉಪ್ಪು ಏನಾದರೂ ಇತ್ತೆ? ಇಲ್ಲವೇ ಇಲ್ಲ. ಕೇವಲ ಚಪಾತಿ ಮಾತ್ರ. ಆಗ ಹೃದಯ "ಅಯ್ಯೋ!" ಎಂದಿತು. "ಬಹುಶಃ ಅಡಿಗೆಯವ ಆತುರದಲ್ಲಿ ಆ ತಿಂಡಿಯ ಕಟ್ಟನ್ನು ಇದರಲ್ಲಿ ಸೇರಿಸಲು ಮರೆತಿರಬೇಕು. ಇದು ಭಗವಂತನ ಇಚ್ಛೆಯೇ ಇರಬೇಕು. ಅದನ್ನು ತಿಂದುಬಿಟ್ಟಿದ್ದರೆ ಒಂದು ಪಕ್ಷ ಈಗ ಎರಡು ತಿಂಗಳಿಂದ ಕಂಗೆಟ್ಟಿದ್ದ ನನ್ನ ನಾಲಗೆಗೆ ಒಗ್ಗಿದರೂ ದೇಹಕ್ಕೆ ಒಗ್ಗುತ್ತಿರಲಿಲ್ಲವೋ ಏನೊ" ಎಂದು ಭಾವಿಸಿ ಆ ಅಂಗಡಿಯಲ್ಲಿ ಸ್ವಲ್ಪ ಪಲ್ಯ ತಯಾರುಮಾಡಿಸಿ ಚಪಾತಿಯನ್ನು ತಿಂದೆವು. ಆಗ ಮನಸ್ಸಿಗೆ ನೆಮ್ಮದಿಯಾಯಿತು. ಈ ಪ್ರದೇಶದಲ್ಲಿ ಸೇಬಿನ ಹಣ್ಣು ಯಥೇಚ್ಛವಾಗಿ ಬೆಳೆಯುವುದರಿಂದ ಅವಕ್ಕೆ ಬೆಲೆ ಬಹಳ ಕಡಮೆ. ದೊಡ್ಡ ದೊಡ್ಡ ಸೈಜಿನ ಒಂದು ಡಜ಼ ಹಣ್ಣಿಗೆ ಕ್ರಯ ಕೇವಲ ನಾಲ್ಕೇ ಆಣೆ. ಎರಡು ಡಜನ್ ಸೇಬಿನ ಹಣ್ಣು ಕೊಂಡುಕೊಂಡು ಕೂಲಿಯವನಿಗೂ ಕೆಲವನ್ನು ಕೊಟ್ಟು ಸರಯೂ ನದಿಯ ಜನಸಂಚಾರದ ತೂಗು ಸೇತುವೆ ದಾಟಿ ಆಚೆ ದಡಕ್ಕೆ ಹೋದೆ.

ಇಲ್ಲಿಂದ ರಸ್ತೆ ಒಂದೇ ಸಮ ಕಡಿದು. ಲೋಹಘಾಟ್ ತಲುಪುವವರೆಗೂ ಒಂದೇ ಸಮ ಹತ್ತಬೇಕಾಯಿತು. ರಸ್ತೆ ಒಳ್ಳೆ ಕಾಡಿನ ಮಧ್ಯದಲ್ಲಿ ಮುಂದುವರಿಯುತ್ತದೆ. ಒಳ್ಳೊಳ್ಳೆ ದೃಶ್ಯಗಳು ಕಣ್ಣಿಗೆ ಬೀಳುತ್ತಲೇ ಇದ್ದುವು. ಹಾಗೇ ಮುಂದುವರಿದು ಲೋಹಘಾಟನ ಹತ್ತಿರ ಹತ್ತಿರಕ್ಕೆ ಬರುವುದರಲ್ಲಿ ಸಾಯಂಕಾಲ ಆರು ಘಂಟೆ ಆಗಿಬಿಟ್ಟಿತು. ಅಲ್ಲಿ ಒಂದು ಮನೋಹರ ದೃಶ್ಯ ಕಣ್ಣಿಗೆ ಬಿತ್ತು. ದೊಡ್ಡ ದೊಡ್ಡ ಹುದ್ದೆಗಳಲ್ಲಿರುವವರನ್ನು ಹಳ್ಳಿಯ ಜನರು ಆಹ್ವಾನಿಸಿದಾಗ ದಾರಿಯ ಉದ್ದಕ್ಕೂ ಎರಡು ಕಡೆಯೂ ತಳಿರು ತೋರಣಗಳಿಂದ ಅಲಂಕಾರ ಮಾಡುವ ಹಾಗೆ ಇಲ್ಲಿಯೂ ದಾರಿಯ ಎರಡು ಕಡೆಯೂ ಏನೊ ಒಂದು ವಿಧವಾದ ಹೊಂಬಣ್ಣದ ಗರಿಗಳಿಂದ ಲೋಹಘಾಟಿನವರೆಗೂ ದಾರಿಯ ಎರಡು ಕಡೆಯೂ ಅಲಂಕಾರ

ಮಾಡಿದ ಹಾಗೆ ಕಂಡುಬಂತು. ಆದರೆ, ಹತ್ತಿರಕ್ಕೆ ಬಂದು ನೋಡುತ್ತೇನೆ ಆ ಅಲಂಕಾರ ಮಾನವ ಕೃತವಲ್ಲ, ದೇವಕೃತ. ಅವು ತಾಳೆ ಗಿಡಗಳಂತಿರುವ ಒಂದು ವಿಧವಾದ ಜೇಲಿ ಗಿಡಗಳಿಂದ ಹೊರಬೆಳದಿರುವ ಹೂ ಗೊಂಚಲು ಗಳು. ಬಹಳ ಮನೋಹರವಾಗಿ ಕಂಡುವು. ಆ ಗಿಡದ ಹೆಸರು "ರಾಮ್‌ಬಾಸ್" ಅಂತ. ಆ ಮನೋಹರ ದೃಶ್ಯವನ್ನು ನೋಡುತ್ತ ನೋಡುತ್ತ ಮುಂದುವರಿದು ಸಾಯಂಕಾಲ ಏಳು ಘಂಟೆಗೆ ಲೋಹಘಾಟನ್ನು ತಲುಪಿದೆ. ನನ್ನ ಸಂಕಲ್ಪವಿತ್ತು, ಇಲ್ಲಿಂದ ಮಾಯಾವತಿಗೆ ಕೇವಲ ಮೂರೂವರೆ ಮೈಲಿಯಾದ್ದರಿಂದ, ಇಂದೇ ಮಾಯಾವತಿಯನ್ನು ತಲುಪಿ ಬಿಡಬೇಕು ಎಂಬುದಾಗಿ. ಆದರೆ ಆಗಲೇ ಮುಂಗತ್ತಲು ಕಾಲಿಡುತ್ತಿತ್ತು. ಲೋಹಘಾಟನ ಜನರು ಹೇಳಿದರು: "ಸ್ವಾಮಿಜಿ, ಈ ಹೊತ್ತಿನಲ್ಲಿ ಮಾಯಾವತಿಗೆ ತೆರಳುವುದು ಸರಿಯಲ್ಲ. ಇದು ಹುಲಿ ಕರಡಿಗಳ ಸಂಚಾರ ಸಮಯ." ಆದ್ದರಿಂದ ಇಂದಿನ ರಾತ್ರಿಯನ್ನು ಇಲ್ಲೇ ಒಂದು ಹೋಟೆಲಿನಲ್ಲಿ ಕಳೆದು ಬೆಳಗ್ಗೆ ಬಹಳ ಹೊತ್ತಿಗೆ ಮುಂಚೆ ಎದ್ದೆ. ೬-೩೦ ಕ್ಕೆ ಹೊರಟು ೮ ಘಂಟೆ ಹೊತ್ತಿಗೆ ಮಾಯಾವತಿಯನ್ನು ತಲುಪಿದೆ.

ನಮ್ಮ ಈ ಮಾಯಾವತಿ ಆಶ್ರಮ ಬಹಳ ಸುಂದರ ಜಾಗದಲ್ಲಿದೆ. ಸುತ್ತಲೂ ಕಾಡು. ಹತ್ತಿರ ಜೇರೆ ಯಾವ ಮನೆಗಳೂ ಇಲ್ಲ. ಧ್ಯಾನಕ್ಕೆ ಬಹಳ ಯೋಗ್ಯವಾದ ಸ್ಥಳ. ಇದರ ಎತ್ತರ ೬,೫೦೦ ಅಡಿ ಇದೆಯಂತೆ. ಇಲ್ಲಿಂದಲೂ ಹಿಮಾಲಯ ಶ್ರೇಣಿಯ ಒಳ್ಳೆಯ ದೃಶ್ಯ ಕಂಡು ಬರುತ್ತದೆ. ಇಲ್ಲಿ ನಾಲ್ಕೈದು ದಿನ ಇದ್ದು ಶ್ಯಾಮಲತಲ, ತಣಕಪುರ, ಬೆರಿಲಿ ಮಾರ್ಗವಾಗಿ ತಾ|| ೩-೮-'೫೧ ಕ್ಕೆ ಹರಿದ್ವಾರಕ್ಕೆ ಬಂದೆ. ಇಲ್ಲಿ ಬ್ರಹ್ಮ ಕುಂಡಕ್ಕೆಹೋಗಿ ಸ್ನಾನಮಾಡಿ ನಾನು ತಂದಿದ್ದ ಕೈಲಾಸ-ಮಾನಸಸರೋವರ ತೀರ್ಥವನ್ನು ಸ್ವಲ್ಪ ಅದರಲ್ಲಿ ಸುರಿದು ಆಗಲೇ ಪವಿತ್ರವಾಗಿರುವ ಗಂಗಾ ನದಿಯನ್ನು ಇನ್ನೂ ಪವಿತ್ರವಾದುದನ್ನಾಗಿ ಮಾಡಿ, ಗಂಗಾ ನದಿಯ ನೀರು ಕುಡಿಯುವವರೆಲ್ಲರಿಗೂ ಈ ರೂಪವಾಗಿ ಕೈಲಾಸ-ಮಾನಸಸರೋವರದ ತೀರ್ಥ ದೊರೆಯಲಿ ಎಂದು ಹಾರೈಸಿದೆ. ಇಲ್ಲಿಂದ ಹೃಷೀಕೇಶಕ್ಕೂ ಹೋಗಿ ಹಿಂದಿರುಗಿ ಹರಿದ್ವಾರಕ್ಕೆ ಬಂದೆ. ಹರಿದ್ವಾರವನ್ನು ತಾ|| ೭-೮-'೫೧ ಕ್ಕೆ ಬಿಟ್ಟು ಡೆಹಲಿ, ನಾಗಪುರ, ಹೈದರಾಬಾದ್, ಸಿಕಂದರಾಬಾದ್, ಬೆಂಗಳೂರು ಮುಖಾಂತರ ತಾ|| ೨೨-೮-'೫೧ ಕ್ಕೆ ಮೈಸೂರಿಗೆ ಬಂದೆ.

ಬರುವಾಗ ದಾರಿಯಲ್ಲಿ ಸಿಕ್ಕಿದ ಯಮುನೆ, ನರ್ಮದೆ, ಗೋದಾವರಿ, ಕೃಷ್ಣ, ಕಾವೇರಿ ಈ ನದಿಗಳಿಗೆಲ್ಲಾ ಟ್ರೈನಿನಿಂದಲೇ ಕೈಲಾಸ-ಮಾನಸ ಸರೋವರದ ತೀರ್ಥ ಸುರಿದು ಇವುಗಳ ನೀರು ಕುಡಿಯುವವರೆಲ್ಲರಿಗೂ ಕೈಲಾಸ-ಮಾನಸಸರೋವರದ ತೀರ್ಥ ದೊರೆತು ಅವರ ಜನ್ಮ ಪಾವನ ವಾಗಲಿ ಎಂದು ಹಾರೈಸಿದೆ.

ಮೈಸೂರಿನಲ್ಲಿ ಚಾಮುಂಡಿ ಬೆಟ್ಟಕ್ಕೆ ಹೋಗಿ ಮಹಿಷಾಸುರನನ್ನು ಮತ್ತು ಆತನನ್ನು ಸಂಹಾರಮಾಡಿದ ಚಾಮುಂಡೇಶ್ವರೀ ದೇವಿಯನ್ನು ದರ್ಶನಮಾಡಿದೆ. ತಾ|| ೨೫-೮-'೫೧ ಕ್ಕೆ ಮೈಸೂರನ್ನು ಬಿಟ್ಟು ಶಿವನ ಸಮುದ್ರ, ಕೊಳ್ಳೇಗಾಲ, ಕೊಯಂಬತ್ತೂರು, ಶ್ರೀರಾಮಕೃಷ್ಣ ವಿದ್ಯಾಲಯ ಇವುಗಳ ಮಾರ್ಗವಾಗಿ ಮೆಟ್ಟುಪಾಳಯಕ್ಕೆ ಬಂದೆ. ಅಲ್ಲಿಂದ ನೀಲಗಿರಿ ಟ್ರೈನು ಹತ್ತಿ ತಾ|| ೫-೯-'೫೧ ಕ್ಕೆ ಊಟಿಯನ್ನು ತಲುಪಿದೆ.

ಈ ರೀತಿಯಾಗಿ ಭಗವಂತ ನನ್ನನ್ನು ನಾನು ಹೊರಟ ಸ್ಥಳಕ್ಕೆ ಸುರಕ್ಷಿತವಾಗಿ ಕರೆದುಕೊಂಡುಬಂದುದಕ್ಕಾಗಿ ಆತನನ್ನು ಹೃತ್ಪೂರ್ವಕ ವಾಗಿ ವಂದಿಸಿದೆ. ನಾನು ತಂದಿದ್ದ ತೀರ್ಥಪ್ರಸಾದಗಳನ್ನು ಭಕ್ತರೆಲ್ಲರಿಗೂ ಹಂಚಿ, ನಾನು ಯಾತ್ರೆಯ ಸಮಯದಲ್ಲಿ ತೆಗೆದಿದ್ದ ಫೋಟೋಗಳೆಲ್ಲವನ್ನೂ ಎಲ್ಲರಿಗೂ ತೋರಿಸಿ, ನನಗೆ ದೊರೆತ ಯಾತ್ರಾನುಭವಗಳನ್ನೆಲ್ಲಾ ಎಲ್ಲರಿಗೂ ವಿವರಿಸಿ ಹೇಳಿ, ಎಲ್ಲರ ಹೃದಯವನ್ನೂ ಆನಂದಗೊಳಿಸಿ ಅವರ ಆನಂದದಲ್ಲಿ ನಾನೂ ಭಾಗಿಯಾದೆ.

ಭಗವಂತ ಸರ್ವರಿಗೂ ಕೈಲಾಸ-ಮಾನಸಸರೋವರ ದರ್ಶನ ಮಾಡಿಬರುವ ಸುಯೋಗವನ್ನು ಆದಷ್ಟು ಬೇಗ ಕಲ್ಪಿಸಿಕೊಟ್ಟು ಸನ್ಮಂಗಳವನ್ನು ನೀಡಲಿ.

ಜಯ ಪರಮೇಶ್ವರ ಪರಮ ಭಿಕಾರಿ,
ಕಲ್ಪಮೇರು ಗುರು ಯೋಗ ಆಚಾರಿ |
ತರುತಲ ಆಲಯ ವಸನ ದಿಶಾಚಯ,
ಭೀತ ನಿರಾಶ್ರಯ ಭವಭಯಹಾರಿ |
ಹರ ಕರುಣಾಕರ ವರದಾಭಯಕರ,
ಮದನ-ಮಾನ-ಹರ ಶಿವ ಶುಭಕಾರಿ |

**ಜೈ ಕೈಲಾಸಪತೀಕೀ ಜೈ ! ಜೈ ಪಾರ್ವತೀದೇವೀಕೀ ಜೈ !**

**ಓಂ ಶಾಂತಿಃ ! ಓಂ ಶಾಂತಿಃ ! ಓಂ ಶಾಂತಿಃ !**

